

# ಸಿದ್ಧಗಂಗಾ



ಸೆಪ್ಟೆಂಬರ್ ೨೦೦೦



ಶ್ರೀಮಠದಲ್ಲಿ ಗಣೇಶನ ಹಬ್ಬದ ಸಡಗರ

**ಪ್ರಧಾನ ಸಂಪಾದಕ**
ಚನ್ನಪ್ಪ ಎರೇಸೀಮೆ

**ಸಂಪಾದಕ**
ಹೆಚ್. ವಿ. ವೀರಭದ್ರಯ್ಯ

**ಸಹ ಸಂಪಾದಕರು**
ಎಚ್. ಎಸ್. ಸಿದ್ಧಗಂಗಪ್ಪ
ಎಂ. ರೇಣುಕಾರಾಧ್ಯ

**ಪ್ರಕಾಶಕರು**
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

**ಸಲಹಾ ಸಮಿತಿ**
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಗೊ.ರು. ಚನ್ನಬಸಪ್ಪ
ಟಿ.ಆರ್. ಮಹಾದೇವಯ್ಯ
ಪ್ರೊ. ಆರ್. ರಾಚಪ್ಪ
ಟಿ. ಕೆ. ನಂಜುಂಡಪ್ಪ
ಡಾ. ಎಂ.ಎನ್. ಚನ್ನಬಸಪ್ಪ
ಪಿ.ಎಸ್. ಪುಟ್ಟಶಂಕರಯ್ಯ
ಬಿ. ಎಸ್. ಪರಮಶಿವಯ್ಯ

**ಸದಸ್ಯರು**
ಕೆ.ಎಸ್. ಶಂಕರಯ್ಯ
ಸಿ. ಎಸ್. ಸಿದ್ಧಲಿಂಗಯ್ಯ
ಪಿ. ವಿ. ಹುಚ್ಚವೀರಯ್ಯ
ಕೆ. ಸಿ. ಶಿವಗಂಗಯ್ಯ
ಎಸ್. ವಿಶ್ವನಾಥ್
ಪಿ.ಎನ್. ಚಂದ್ರಶೇಖರಯ್ಯ
ಕೆ.ಎಚ್. ಶಿವರುದ್ರಯ್ಯ

**ಮುದ್ರಕರು :**
ಗೀತಾಂಜಲಿ ಎಂಟರ್‌ಪ್ರೈಸಸ್,
ನಂ. ೫, ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೦೮೬


ಲೇಖಕರ ಅಭಿಪ್ರಾಯಗಳು
ಶ್ರೀ ಮಠದ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೬ ಸೆಪ್ಟಂಬರ್ ೨೦೦೦ ಸಂಚಿಕೆ : ೯

## ಒಳಪುಟಗಳಲ್ಲಿ .....




**ವಿಳಾಸ :**
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

**ಚಂದಾ ವಿವರ :**
ವಾರ್ಷಿಕ ಚಂದಾ ರೂ. ೬೦.
ಆಜೀವ ಸದಸ್ಯತ್ವ ರೂ. ೫೦೦.
ಬಿಡಿ ಪ್ರತಿ ರೂ. ೫.00

# ಡಾ|| ಎಸ್. ರಾಧಾಕೃಷ್ಣನ್ - ಒಂದು ಸ್ಮರಣೆ......

ಸೆಪ್ಟೆಂಬರ್ ಐದು, ಡಾ|| ಸರ್ವಪಲ್ಲಿ ರಾಧಾಕೃಷ್ಣನ್‌ರವರ ಜನ್ಮದಿನ. ಶಿಕ್ಷಕರ ದಿನಾಚರಣೆ. ಇಡೀ ರಾಷ್ಟ್ರ ಸಮರ್ಪಿಸುತ್ತಿರುವ ಗುರುವಂದನ ಗೌರವ. ಸಮಸ್ತ ಗುರು ಸಮುದಾಯಕ್ಕೆ ಸಂದ ಮನ್ನಣೆ. ತನ್ನ ಜನ್ಮದಿನಾಚರಣೆಯನ್ನು ಶಿಕ್ಷಕರ ಸ್ಮರಣೆಗಾಗಿ ಆದರ್ಶ ಶಿಕ್ಷಕರೆನಿಸಿ ಪೂಜ್ಯರಾದ ಡಾ|| ರಾಧಾಕೃಷ್ಣನ್ ಅವರು ಅಪೇಕ್ಷಿಸಿದ ಘನಮೌಲ್ಯ. ಭಾರತೀಯ ಭವ್ಯ ಪರಂಪರೆಯ ಆದರ್ಶ ಜ್ಞಾನಘನರಾದ ಡಾ|| ರಾಧಾಕೃಷ್ಣನ್‌ರವರು ೧೮೮೮ನೇ ಸೆಪ್ಟೆಂಬರ್ ೫ ರಂದು ತಮಿಳುನಾಡಿನ ತಿರುತನಿ ಎಂಬ ಪುಟ್ಟ ಗ್ರಾಮದಲ್ಲಿ ಜನಿಸಿದರು. ತಂದೆ ವೀರಾಸ್ವಾಮಿ, ತಾಯಿ ಸೀತಮ್ಮ ಸಾಂಪ್ರದಾಯಿಕ ಸಾತ್ವಿಕ ಕುಟುಂಬ. ಸಾಮಾನ್ಯರಾಗಿ ಹುಟ್ಟಿ ಅಸಾಮಾನ್ಯವಾಗಿ ಬೆಳೆದು ವಿಶ್ವಮಾನ್ಯವಂದ್ಯರೆನಿಸಿದ ಸರ್ವಪಲ್ಲಿಯವರ ಜೀವನ ರೋಮಹರ್ಷಪೂರ್ಣ. ತಿರುತನಿ, ತಿರುಪತಿ, ವೆಲ್ಲೂರು, ಮದ್ರಾಸ್ (ಚೆನ್ನೈ)ಗಳಲ್ಲಿ ವಿದ್ಯಾಭ್ಯಾಸ. ಕ್ರಿಶ್ಚಿಯನ್ ಕಾಲೇಜುಗಳ ಪರಿಸರ. ಭಾರತೀಯ ಜೀವನ, ಸಂಸ್ಕೃತಿಗಳ ಬಗ್ಗೆ ಅವಹೇಳನದಿಂದಾಗಿ ವಿವಾದ, ಸಂಘರ್ಷಗಳು. ಪರಿಣಾಮವಾಗಿ ಹಿಂದೂ ಸಂಸ್ಕೃತಿ, ತತ್ವಜ್ಞಾನಗಳನ್ನು ಆಳವಾಗಿ ಅಧ್ಯಯನ ಮಾಡಬೇಕೆಂಬ ಅದಮ್ಯ ಛಲ. ಮಹಾತ್ಮಗಾಂಧಿ, ರವೀಂದ್ರನಾಥ ಠಾಗೂರ್, ವಿವೇಕಾನಂದರ ಪ್ರಭಾವ. ಧರ್ಮ-ಸಂಸ್ಕೃತಿ-ತತ್ವದರ್ಶನವನ್ನು ಪಾಶ್ಚಿಮಾತ್ಯರಿಗೆ ದರ್ಶನ ಮಾಡಿಕೊಡುವ ಅವಿಶ್ರಾಂತ ದುಡಿಮೆಗೆ ಅರ್ಪಣ. ತಮ್ಮ ಸ್ವಾಧ್ಯಾಯ ಪ್ರವಚನಗಳ ಫಲವಾಗಿ ಆದರ್ಶ ಶಿಕ್ಷಕ. ಶ್ರೇಷ್ಠ ಶಿಕ್ಷಣತಜ್ಞ, ರಾಜಕೀಯ ಮುತ್ಸದ್ದಿ, ಆದರ್ಶ ಸದ್ಗಹಸ್ಥ, ವಿಶ್ವದ ಶ್ರೇಷ್ಠ ತತ್ವಜ್ಞಾನಿಯಾಗಿ ಅರಳಿದ್ದು ಒಂದು ಮಹಾಕಾವ್ಯವಾಗಿದೆ.

ಅಧ್ಯಾಪಕರಾಗಿ, ತತ್ವಶಾಸ್ತ್ರದ ಉಪಪ್ರಾಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ಮದ್ರಾಸಿನ ಕ್ರಿಶ್ಚಿಯನ್ ಕಾಲೇಜಿನಲ್ಲಿ ಸೇವೆ ಸಲ್ಲಿಸಿದ ನಂತರ ರಾಜಹಮುಂಡ್ರಿಯ ಕಾಲೇಜಿನಲ್ಲಿ ಪ್ರಾಧ್ಯಾಪಕರಾದರು. 'ಮಾರಲ್ ಎತಿಕ್ಸ್ ಇನ್ ವೇದಾಂತ' ಸಂಶೋಧನಾತ್ಮಕ ಪ್ರಬಂಧ ಬರೆದು ಖ್ಯಾತಿ ಗಳಿಸಿದರು. ೧೯೧೮ರಿಂದ ೧೯೨೧ರವರೆಗೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ತತ್ವಶಾಸ್ತ್ರದ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ ಸರ್ವಪಲ್ಲಿಯವರ ಜೀವಿತಾವಧಿ ಅಮೂಲ್ಯವಾಯಿತು. ಮೈಸೂರಿನಿಂದ ಕಲ್ಕತ್ತದ ವಿಶ್ವವಿದ್ಯಾಲಯದ 'ಕಿಂಗ್ ಜಾರ್ಜ್-೫ ಛೇರ್ ಆಫ್ ಮೆಂಟಲ್ ಅಂಡ್ ಮಾರಲ್ ಸೈನ್ಸ್' ಅಧ್ಯಯನ ಪೀಠಕ್ಕೆ ಮುಖ್ಯಸ್ಥರಾಗಿ ಹೊರಟಾಗ ಅವರ ವಿದ್ಯಾರ್ಥಿಗಳು ಅವರನ್ನು ಕೋಚ್ ಗಾಡಿಯಲ್ಲಿ ಕುಳ್ಳಿರಿಸಿ ನಿಲ್ದಾಣದವರೆಗೆ ಗಾಡಿ ಎಳೆಯುವುದರ ಮೂಲಕ ತಮ್ಮ ಗುರುಭಕ್ತಿಯನ್ನು ಪ್ರಕಟಿಸಿದ್ದು ಡಾ|| ರಾಧಾಕೃಷ್ಣನ್ ಅವರ ಆದರ್ಶ ಶಿಕ್ಷಕ ವ್ಯಕ್ತಿತ್ವಕ್ಕೆ ನಿತ್ಯ ಸಾಕ್ಷಿಯಾಯಿತು. ಕಲ್ಕತ್ತದಲ್ಲಿದ್ದಾಗ ಭಾರತೀಯ ತತ್ವಶಾಸ್ತ್ರ ಭಾಗ ೧, ೨ ಬರೆದರು. ಈ ಗ್ರಂಥಗಳು ಅವರನ್ನು ಜಗದ್ವಿಖ್ಯಾತ ತತ್ವಜ್ಞಾನಿಯನ್ನಾಗಿಸಿದವು. ಕೇಂಬ್ರಿಡ್ಜ್ ವಿಶ್ವವಿದ್ಯಾಲಯದ ಸಮ್ಮೇಳನದ ಬಾಗಿಲು ತೆರೆಯಿತು. ಹಾರ್ವರ್ಡ್ ವಿಶ್ವವಿದ್ಯಾಲಯ ಆದರದ ಆಮಂತ್ರಣ ನೀಡಿತು. ಅಮೇರಿಕೆಯ ಚಿಕಾಗೋ ವಿಶ್ವವಿದ್ಯಾಲಯ ಉಪನ್ಯಾಸ ಲಾಭ ಗಳಿಸಿತು. ಲಂಡನ್, ಮ್ಯಾಂಚೆಸ್ಟರ್ ವಿಶ್ವವಿದ್ಯಾಲಯಗಳಲ್ಲಿ ಉಪನ್ಯಾಸ ನೀಡಿದರು. ೧೯೩೧ರಲ್ಲಿ ಕಿಂಗ್ ಜಾರ್ಜ್ ಅವರಿಂದ 'ಸರ್' ಗೌರವದಿಂದ ಸನ್ಮಾನಿತರಾದರು. ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿ ನೇಮಕಾತಿ ಪಡೆದರು. ಈ ಮಧ್ಯೆ 'ಹಿಂದುವಿನ ಜೀವನ ದೃಷ್ಟಿ', 'ಜೀವನದ ಆದರ್ಶ ದೃಷ್ಟಿಕೋನ', 'ಪೌರ್ವಾತ್ಯ ಧರ್ಮ ಮತ್ತು ನೀತಿಶಾಸ್ತ್ರ', 'ಪೌರ್ವಾತ್ಯ ಧರ್ಮಗಳು ಮತ್ತು ಪಾಶ್ಚಿಮಾತ್ಯ ವಿಚಾರಧಾರೆ', 'ಸಮಕಾಲೀನ ದರ್ಶನಗಳಲ್ಲಿ ಧರ್ಮದ ಪ್ರಭುತ್ವ', 'ಟ್ಯಾಗೋರ್ ದರ್ಶನ', 'ನಾಗರಿಕತೆಯ ಭವಿಷ್ಯ' ಗ್ರಂಥಗಳನ್ನು ರಚಿಸಿದರು.

ಡಾ|| ಸರ್ವಪಲ್ಲಿಯವರು ದೇಶ-ವಿದೇಶಗಳಲ್ಲಿ ಶಿಕ್ಷಣ ನೀತಿಯನ್ನು ರೂಪಿಸಿದರು. ೧೯೩೧-೧೯೩೬ರವರೆಗೆ ವಾಲ್ಟೇರಿನ ವಿಶ್ವವಿದ್ಯಾಲಯದ ಉಪಕುಲಪತಿಯಾಗಿ, ೧೯೩೯-೪೮ರವರೆಗೆ ಬನಾರಸ್ ಹಿಂದೂ ವಿಶ್ವವಿದ್ಯಾಲಯದ ಉಪಕುಲಪತಿಗಳಾಗಿ, ೧೯೪೮-೪೯ರಲ್ಲಿ ಯು.ಜಿ.ಸಿ.ಯ ಮುಖ್ಯಸ್ಥರಾಗಿ, ೧೯೫೩-೬೨ರವರೆಗೆ ದಿಲ್ಲಿ ವಿಶ್ವವಿದ್ಯಾಲಯದ ಕುಲಪತಿಗಳಾಗಿ ಕಾರ್ಯ ನಿರ್ವಹಿಸಿದರು. ಈ ಅವಧಿಯಲ್ಲಿ 'ಸ್ವಾತಂತ್ರ್ಯ ಮತ್ತು ಸಂಸ್ಕೃತಿ', 'ಭಾರತದ ಹೃದಯ', 'ಧರ್ಮ ಮತ್ತು ಸಮಾಜ', 'ಶಿಕ್ಷಣ ರಾಜಕಾರಣ ಮತ್ತು ಯುದ್ಧ', 'ಭಾರತ ಮತ್ತು ಚೀನಾ' ಕೃತಿಗಳನ್ನು ಪ್ರಕಟಿಸಿದರು.

೧೯೪೭-೪೯ರವರೆಗೆ ಭಾರತ ಸಂವಿಧಾನ ಸಭೆಯ ಸದಸ್ಯರಾಗಿ, ೧೯೪೯ರಲ್ಲಿ ರಷ್ಯಾದಲ್ಲಿ ಭಾರತದ ಪ್ರಥಮ ರಾಯಭಾರಿಯಾಗಿ, ಸ್ಟಾಲಿನ್ನನಂಥ ಸರ್ವಾಧಿಕಾರಿಯನ್ನೂ ಮೃದುಗೊಳಿಸಿದ ಸಾತ್ವಿಕ ರಾಜರ್ಷಿ ರಾಧಾಕೃಷ್ಣನ್. ೧೯೫೨-೧೯೬೨ರವರೆಗೆ ಭಾರತದ ಉಪರಾಷ್ಟ್ರಪತಿಯಾಗಿ, ೧೯೬೨-೬೭ರವರೆಗೆ ರಾಷ್ಟ್ರಪತಿಯಾಗಿ ಪಂಡಿತ ಜವಾಹರಲಾಲ ನೆಹರು, ಶ್ರೀ ಲಾಲ್ ಬಹಾದ್ದೂರ್ ಶಾಸ್ತ್ರಿ ಶ್ರೀಮತಿ ಇಂದಿರಾಗಾಂಧಿಯವರಂಥ ಮೂವರು ಪ್ರಧಾನ ಮಂತ್ರಿಗಳನ್ನು ಕಂಡರು. ೧೯೬೭ರ ನಂತರದ ಭಾರತದ ರಾಜಕಾರಣ ಹದಗೆಟ್ಟಿತು. ಸ್ವಾರ್ಥ ವಿಜೃಂಭಿಸಿತು. ಡಾ|| ಸರ್ವಪಲ್ಲಿಯವರ ಮನಸ್ಸು ನೊಂದಿತು. ತಮ್ಮ ಜೀವನದ ೭೮ನೇ ವಯಸ್ಸಿನಲ್ಲಿ ನಿವೃತ್ತರಾದರು. ಆದರ್ಶ ಸದ್ಗಹಸ್ಥರಾಗಿ ಧರ್ಮಪತ್ನಿ ಶಿವಕಾಮಮ್ಮನವರೊಂದಿಗೆ ಬಾಳಿದರು. ಐದು ಹೆಣ್ಣು ಒಂದು ಗಂಡು ಮಕ್ಕಳ ತಂದೆಯಾಗಿ ಸಂತೃಪ್ತ ಜೀವನ ನಡೆಸಿದರು. ಶುದ್ಧ ಶಾಖಾಹಾರಿ, ಧೂಮಪಾನ ಮುಕ್ತ, ಮದ್ಯಪಾನ ವರ್ಜಿತ, ಸುಜ್ಞಾನಿ, ತತ್ವಜ್ಞಾನಿ, ಸ್ವಾಧ್ಯಾಯಪ್ರೇಮಿ, ಕ್ರಿಕೆಟ್ ರಸಿಕ, ಮಕ್ಕಳ ಪ್ರೀತಿಯ ತಾತ ೧೯೭೫ನೇ ಏಪ್ರಿಲ್ ೧೭ರಂದು ಅಸ್ತಂಗತರಾದರು.

ಶಿಕ್ಷಣವೆಂದರೆ ದ್ವಿತೀಯ ಜನ್ಮ 'ಅಕ್ಷರಜ್ಞಾನವಷ್ಟೇ ಶಿಕ್ಷಣವಲ್ಲ. ಜ್ಞಾನವಷ್ಟೇ ಶಿಕ್ಷಣವಲ್ಲ. ಆದರೆ ವಿವೇಕದ ಬೆಳವಣಿಗೆ, ಇನ್ನಿತರ ವಸ್ತು ವಿಷಯಗಳನ್ನು ಕರುಣೆ, ಅನುಕಂಪ ಪೂರ್ಣವಾಗಿ ನೋಡುವುದನ್ನು ಕಲಿಯುವುದು', 'ಜ್ಞಾನವು ಬುದ್ಧಿ ಹೃದಯಗಳೆರಡರಲ್ಲಿಯೂ ಕರುಣೆಯುಕ್ಕುವಂತೆ ಮಾಡಬೇಕು. ಕೇವಲ ಅಕ್ಷರಾಭ್ಯಾಸ ಮಾಡಿ ಉನ್ನತ ಮಟ್ಟಕ್ಕೇರಿ ದೇಶದ ಎಲ್ಲ ರಂಗಗಳಲ್ಲಿ ಭ್ರಷ್ಟತೆ ಲಂಚಗುಳಿತನ ಭೀಷಣತೆಗೆ ಕಾರಣೀಭೂತರಾಗಿರುವ ಬಹಳಷ್ಟು ಜನ ಸಾಕ್ಷರರು ಇಂದು ರಾಕ್ಷಸರಾಗುತ್ತಿರುವುದು ಅಷ್ಟೇ ಕಟುಸತ್ಯವಾಗಿದೆ' ಎನ್ನುವ ಡಾ|| ರಾಧಾಕೃಷ್ಣನ್‌ರವರ ನುಡಿಗಳಲ್ಲಿ ನಾವಿಂದು ಆತ್ಮಪರೀಕ್ಷೆ ಮಾಡಿಕೊಳ್ಳಬೇಕಾಗಿದೆ. ಶಿಕ್ಷಕ ವೃತ್ತಿಗೆ ಭವ್ಯ ಪರಂಪರೆಯಿದೆ. ಯುವ ಜನಾಂಗದ ಮನಸ್ಸು-ಹೃದಯಗಳನ್ನು ರೂಪಿಸುವ ಜವಾಬ್ದಾರಿಯಿದೆ. ಶಿಕ್ಷಕ ವೃತ್ತಿಯು ಪ್ರವೃತ್ತಿಯಾಗಬೇಕು. ಜೀವನದ ಉಸಿರಾಗಬೇಕು. ಸದ್ಗುಣಿ, ಸದಾಚಾರಿ, ಸದುವಿನಯ ಸಂಪನ್ನ, ಕರ್ತವ್ಯನಿಷ್ಠ, ಅರಿವುಸಂಪನ್ನ, ಕ್ಷಮಾಶೀಲ, ನಿಸ್ವಾರ್ಥ ಕಾಯಕಜೀವಿ ಶಿಕ್ಷಕನಿಗೆ ಭವ್ಯ ಕಟ್ಟಡಗಳಾಗಲೀ, ಉಪಕರಣ ಪರಿಕರಗಳಾಗಲೀ, ಶ್ರೀಮಂತ ಶಿಕ್ಷಣ ಸಂಸ್ಥೆಗಳಾಗಲೀ ಬದಲಿ ಪ್ರತಿನಿಧಿಗಳಾಗಲಾರವು ಎನ್ನುತ್ತಾರೆ ಡಾ|| ರಾಧಾಕೃಷ್ಣನ್ ಅವರು. ಮುಂದುವರೆದು - 'ಒಬ್ಬ ಶಿಕ್ಷಕ ಏನು ಕಲಿಸುತ್ತಾನೆ ಅಷ್ಟೇ ಮಹತ್ವವಲ್ಲ. ಅದರೊಂದಿಗೆ ಆತ ಹೇಗಿದ್ದಾನೆ ಎಂಬುದು ಅಷ್ಟೇ ಮಹತ್ವದ್ದಾಗಿದೆ. ಅದರ ಜೊತೆಗೆ ಸುತ್ತಣ ಪರಿಸರವೂ ಕೂಡ ಪರಿಣಾಮ ಬೀರುತ್ತದೆ. ಈ ಒಳ ಅರಿವನ್ನು ಹೊಂದಿದ ಶಿಕ್ಷಕ ವಿದ್ಯಾರ್ಥಿಗಳನ್ನು ನಿರ್ಮಾಣ ಮಾಡಬಲ್ಲ. ರಾಷ್ಟ್ರದ ಭವಿತವ್ಯ ರೂಪಿಸಬಲ್ಲ' ಎನ್ನುತ್ತಾರೆ. ಶಿಕ್ಷಕ ಬಂಧುಗಳು ಇತ್ತ ಗಮನಿಸುವರೇ ಎಂದು 'ಸಿದ್ಧಗಂಗಾ' ಆಶಿಸುತ್ತದೆ.

(ಗ್ರಂಥ ಋಣ : ವಿಶ್ವವಿಖ್ಯಾತ ತತ್ವಜ್ಞಾನಿ ಡಾ|| ಸರ್ವಪಲ್ಲಿ ರಾಧಾಕೃಷ್ಣನ್‌ರು - ಪ್ರೊ. ಸಿದ್ಧಪ್ಪ ಲಂಗೋಟಿ (ಚಾಂದಕವಟೆ)

- ಸಂಪಾದಕ





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಚಿನ್ನವ ನೀ ತೊಡಲಿಲ್ಲ ರನ್ನವ ನೀ ತೊಡಲಿಲ್ಲ
ಪಟ್ಟೆ ಪೀತಾಂಬರವ ಉಡಲಿಲ್ಲ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಿರುದು ಬೇಕೆನಲಿಲ್ಲ ಬಾವಲಿ ತಾಯೆನಲಿಲ್ಲ
ಕಾಯಕವಿರದೆ ಕ್ಷಣವಿರಲಿಲ್ಲ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಆಶನಕ್ಕೆ ಬರಲಿಲ್ಲ ವಸನಕ್ಕೆ ಬರಲಿಲ್ಲ
ಭಕ್ತಿ ಪಥವ ತೋರ ಬಂದವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕೀರ್ತಿಗೆ ಬರಲಿಲ್ಲ ವಾರ್ತೆಗೆ ಬರಲಿಲ್ಲ
ಕಾಯಕ ದಾಸೋಹಕೆ ಬಂದವ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಮಡದಿ ಮಕ್ಕಳಿಗಲ್ಲ ಒಡಲಕಳವಳಕಲ್ಲ
ಬಡವ ಬಗ್ಗರಿಗಾಗಿ ನಿನ್ನ ಸೇವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವತತ್ವದ ಸಿರಿಯೆ ಬಸವ ಪ್ರಜ್ಞೆಯ ರವಿಯೆ
ಬಸವ ಸಂಸ್ಕೃತಿಯ ಸಿರಿ ಶರಧಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇರುಳು ಹಗಲುಗಳ ಸೋಂಕಿರದಾಕಾಶವೆ
ಪುಣ್ಯ ಪಾಪರಹಿತ ಶ್ರೀ ಬುವಿಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜ್ಞಾನರೂಪ ಘನವೆ ಆನಂದ ಸಾಗರವೆ
ಪರಮಾಕಾಶದ ಚಿತ್ಸೂರ್ಯ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಾವ ವೈದ್ಯನು ನೀನೆ ಮಾಯಾ ರಹಿತನು ನೀನೆ
ಜೀವ ಮಂಗಳ ಶಾಂತ ಶಿವನೀನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವಿಶ್ವಾತ್ಮ ಕಲ್ಯಾಣದಿ ಆತ್ಮಕಲ್ಯಾಣವ
ನಿತ್ಯ ಸಾಧಿಸಿದ ಶಿವಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ



## ಶ್ರೀವಾಣಿ

# ಆತ್ಮಾವಲೋಕನ

ಡಾ|| ರಾಜ್‌ಕುಮಾರ್ ಅಪಹರಣ ವೀರಪ್ಪನ್‌ನಿಂದ, ರಾಜ್ಯ ತಲ್ಲಣಗೊಂಡ ಸಂದರ್ಭ. ಬೀದರ್‌ನಿಂದ ಬೆಂಗಳೂರುವರೆಗೆ, ಚಾಮರಾಜನಗರದಿಂದ ಕೋಲಾರದ ತನಕ, ಮಂಗಳೂರಿನಿಂದ ಮೈಸೂರುವರೆಗೆ ರಾಜ್‌ಕುಮಾರ್ ಅಭಿಮಾನಿಗಳ ಪ್ರತಿಭಟನೆಯ ಮಹಾಪೂರ. ಕಲಾವಿದನ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿ. ರಾಜ್ಯ ತೋರಿದ ಆಸಕ್ತಿ. ಸರ್ಕಾರ ವಹಿಸಿದ ಶೀಘ್ರ ಕ್ರಮ. ದೇವಸ್ಥಾನಗಳಲ್ಲಿ ನಡೆದ ವಿಶೇಷ ಪೂಜೆ. ಜನತೆ ಸಲ್ಲಿಸುವ ಪ್ರಾರ್ಥನೆ, ಉರುಳುಸೇವೆ. ಎಲ್ಲರೂ ಪ್ರೀತಿಯ ದ್ಯೋತಕ. ಕಲೋಪಾಸಕನ ಬಗ್ಗೆ ಜನಸಮೂಹ ತಾಳಿರುವ ಅಭಿಮಾನ. ಇದೆಲ್ಲ ಸದಭಿರುಚಿಯ, ಸುಸಂಸ್ಕೃತಿಯ ಜೀವನಶೈಲಿಯೆನಿಸುತ್ತದೆ ಎಂಬ ಪ್ರಾಜ್ಞರ ಅಭಿಪ್ರಾಯ ಸುದ್ದಿ ಮಾಧ್ಯಮಗಳಾದ ಪತ್ರಿಕೆಗಳು, ಆಕಾಶವಾಣಿ ಮತ್ತು ದೂರದರ್ಶನಗಳ ಪಾತ್ರವೂ ಇಲ್ಲಿ ಗಣನೀಯ; ಎಲ್ಲವೂ ಸ್ವಾಗತಾರ್ಹ.

ಕಾರ್ಗಿಲ್ ಸಮರ ಉತ್ತರದ ತುದಿಯ ಕಾಶ್ಮೀರದ ಕಣಿವೆಯಲ್ಲಿ. ಗಡಿಪಡೆಯ ವೀರಯೋಧರ ದೇಶರಕ್ಷಣೆಯ ಹೋರಾಟ. ಮನೆ-ಮಠ, ಮಡದಿ-ಮಕ್ಕಳು, ಬಂಧು-ಬಳಗ, ಸ್ನೇಹಿತ-ಅಭಿಮಾನಿ, ಹಿತೈಷಿ, ಹಿರಿಯ-ಕಿರಿಯ, ಅಧಿಕಾರಿ, ಸಚಿವ, ಶಾಸಕ, ಗುರು ಎಲ್ಲರನ್ನೂ ಮರೆತು ದೇಶವೇ ದೇವರೆಂದು ಏಕದೃಷ್ಟಿ, ಏಕಭಾವ, ಏಕಗುರಿಯಿಟ್ಟು ದುಡಿವ ಸನ್ನಿವೇಶ. ದುಡಿಮೆ ಪರಹಿತಕ್ಕಾಗಿ, ನಮ್ಮ ನಿಮ್ಮೆಲ್ಲರ ನೆಮ್ಮದಿಯ ಬಾಳುವೆಗಾಗಿ. ನಾವಿಲ್ಲಿ ಮದುವೆ, ಹಬ್ಬ, ಗೃಹಪ್ರವೇಶ, ದಿನಾಚರಣೆ, ಜಯಂತಿ, ಸನ್ಮಾನ, ಬಹುಮಾನ, ಸಭೆ-ಸಮಾರಂಭಗಳಲ್ಲಿ ಮಗ್ನ. ಬೆಚ್ಚನೆಯ ಕೊಠಡಿಗಳು, ಸುತ್ತುವ ಫ್ಯಾನ್‌ಗಳು, ಮುಂದೆ ಬಣ್ಣದ ಟಿ.ವಿ.ಗಳು. ವಿವಿಧ ಸುಖದ ಮಂದಿರಗಳು ನಮಗೆ. ಆದರೆ ಇವೆಲ್ಲವುಗಳ ಮಧ್ಯೆ ವೀರಯೋಧನ ಸ್ಮರಣೆ ಮಾಡುವವರೆಷ್ಟು ಮಂದಿ ಇದ್ದೇವೆ. ಆತ್ಮಾವಲೋಕನದ ಅರಿವು ಮಾನವಪ್ರಜ್ಞೆ ಜಾಗೃತವಾಗಿಲ್ಲವೇಕೆ?

ಕರ್ನಾಟಕದ ಒಬ್ಬ ಯೋಧನ ಪ್ರಸಂಗ. ಮೊನ್ನೆ ಒಬ್ಬರು ರಕ್ಷಣಾ ಇಲಾಖೆಯ ಅಧಿಕಾರಿಗಳು ಶ್ರೀಮಠಕ್ಕೆ ಬಂದಿದ್ದರು. ಅವರು ಹೇಳಿದ್ದನ್ನು ಸಭೆಯ ಗಮನಕ್ಕೆ ತರಬೇಕು. ಕಾರ್ಗಿಲ್ ಯುದ್ಧದಲ್ಲಿ ಭಾಗವಹಿಸಿದ್ದ ಯೋಧನೊಬ್ಬ ವೀರಾವೇಶದಿಂದ ಮುನ್ನುಗ್ಗಿ ನಡೆದ. ಶತ್ರುಪಡೆಯ ಹಲವಾರು ಮಂದಿಯನ್ನು ಮುಗಿಸಿದ. ಅವನ ಕಣ್ಮುಂದೆ ದೇಶವಿತ್ತು. ತಾಯ್ನಾಡಿನ ಘನತೆ-ಗೌರವಗಳಿದ್ದವು ಆವೇಳೆಗೆ ಅವನಿಗೆ ಮದುವೆಯಾಗಿ ಎರಡು ತಿಂಗಳಾಗಿತ್ತು. ಪ್ರೀತಿಯ ಮಡದಿಯನ್ನು ದೂರದೂರಿನಲ್ಲಿ ಬಿಟ್ಟುಬಂದಿದ್ದ. ಹೆಂಡತಿಯಿಂದ ಪತ್ರ ಬಂದಿತ್ತು. ಅದನ್ನು ಓದುವುದಕ್ಕೂ ಸಮಯವಿರಲಿಲ್ಲ. ಹಾಗೆಯೇ ಪತ್ರವನ್ನು ಮಡಚಿ ಜೇಬಿನಲ್ಲಿಟ್ಟುಕೊಂಡು ಮುನ್ನುಗ್ಗಿದ. ಗುಂಡಿನ ಕಾಳಗ ನಡೆದೇ ಇತ್ತು. ಕೊರೆವ ಚಳಿ, ಗಡಗಡ ನಡುಗಿಸುತ್ತಿತ್ತು. ಅತ್ತ ಇತ್ತ ತಿರುಗಿ ನೋಡುವಂತಿರಲಿಲ್ಲ. ಗುಂಡಿನ ಸುರಿಮಳೆಯ ಮಧ್ಯೆ ಪ್ರಾಣದ ಹಂಗು ತೊರೆದು ನಡೆದ. ಶತ್ರುಗಳ ಗನ್ನುಗಳು ಒಂದೇ ಸಮನೆ ಬೆಂಕಿ ಕಾರಿದವು ನಮ್ಮ ಯೋಧ ಜಗ್ಗಲಿಲ್ಲ, ಕುಗ್ಗಲಿಲ್ಲ, ನುಗ್ಗಿ ನಡೆದ. ಗುಂಡಿಗೆ ಪ್ರತಿಗುಂಡು ಕೊಟ್ಟ. ಭಾರತದ ರುಚಿ ತೋರಿಸಿದ. ಒಂದಿಬ್ಬರನ್ನು ಆಹುತಿ ತೆಗೆದುಕೊಂಡ. ಶತ್ರುಗಳ ಗುಂಡುಗಳು ಒಮ್ಮೆಗೇ ನಾಲ್ಕಾರು ದಿಕ್ಕಿನಿಂದ ಯೋಧನನ್ನು ಮುಕ್ಕಿದವು ರಕ್ತದೋಕುಳಿಯಾಯಿತು. ಪ್ರಾಣಾರ್ಪಣೆ ಮಾಡಿದ ದೇಶಕ್ಕಾಗಿ. "ತನಗೆಂದು, ತನ್ನ ಮಡದಿ ಮಕ್ಕಳಿಗೆಂದು ಕುದಿಯಲಿಲ್ಲ, ಕುಂದಲಿಲ್ಲ. ತನ್ನ ತಾಯ್ನಾಡಿಗಾಗಿ, ನಾಡಿನ ಬಂಧುಗಳಿಗಾಗಿ ಸಮರಯಜ್ಞಕ್ಕೆ ಅರ್ಪಿಸಿಕೊಂಡ. ಅವನೇನೋ ರಾಷ್ಟ್ರಕ್ಕಾಗಿ ಮಡಿದ. ಅವನಂತೆ ಹಲವರು ಯುದ್ಧದಲ್ಲಿ ದೇಶರಕ್ಷಣೆಗಾಗಿ ಪ್ರಾಣಾರ್ಪಣೆ ಮಾಡುತ್ತಲೇ ಇದ್ದಾರೆ. ಆದರೆ ಅವನಿಗಾಗಿ, ಅವನಂಥವರಿಗಾಗಿ ನಾವೇನು ಮಾಡಿದ್ದೇವೆ. ಆತ್ಮಾವಲೋಕನ ಮಾಡಿಕೊಳ್ಳಬೇಕಲ್ಲವೇ.

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

**ಹೊತ್ತಾರೆ ಎದ್ದು, ಹೂ ಪತ್ರೆಯ ಕುಯಿತಂದು**
**ಹೊರ ಉಪಚಾರವ ಮಾಡುವುದೆಲ್ಲಾ**
**ಬರಿಯ ಭಾವದ ಬಳಲಿಕೆ ನೋಡಾ**
**ಅಳಲದೆ, ಬಳಲದೆ ಆಯಾಸಂ ಬಡದೆ**
**ಒಳಗಣ ಜ್ಯೋತಿಯ ಬೆಳಗಿನ ಕಳೆಯ ಕಮಲವ**
**ಪೂಜಿಸಬಲ್ಲ ಶರಣಂಗೆ**
**ಬೆಳಗಾಗೆದ್ದು ಪೂಜಿಸಿಹೆನೆಂಬ ಕಳವಳವೆಂದರೇನು ಹೇಳಾ?**
**ಮಹಾಲಿಂಗಗುರು ಶಿವ ಸಿದ್ಧೇಶ್ವರ ಪ್ರಭುವೇ!**

ಸೂರ್ಯೋದಯದೊಳಗಾಗಿ ಎದ್ದು ಪ್ರಾತರ್ವಿಧಿ ಮುಗಿಸಿ ಹೂ-ಪತ್ರಿಗಳನ್ನು ಹುಡುಕಿ ತಂದು ಪೂಜೋಪಚಾರ ಮಾಡುವುದೆಲ್ಲಾ ಬರಿ ಪರಿಶ್ರಮವಾಗುವುದು. ತನ್ನೊಳಗಿನ ಜ್ಯೋತಿಯ ಕಳೆಯನ್ನು ಕಂಡು ಪೂಜಿಸುವ ಶರಣರಿಗೆ ಇದಾವ ಪರಿಶ್ರಮದ ಅವಶ್ಯಕತೆಯು ಇರುವುದಿಲ್ಲ. ಒಳಗಿನ ಲಿಂಗ ಜ್ಯೋತಿಯ ಅನುಭವ ಮಾಡಿಕೊಳ್ಳದೆ, ಹೊರಗೆ ಎಷ್ಟು ದಿನ ಪೂಜೆ ಮಾಡಿದರೂ ಅದೆಲ್ಲ ವ್ಯರ್ಥವಾಗುವುದು. ಅರುಹಿನ ಪೂಜೆಯೇ ನಿಜವಾದ ಪೂಜೆ. ಅಂತಹ ಪೂಜೆಯನ್ನು ಮಾಡಿಯೇ ಶರಣರು ತಮ್ಮ ಎಲ್ಲ ಪ್ರಾಪಂಚಿಕ ಕಳವಳವನ್ನು ದೂರ ಮಾಡಿಕೊಂಡು ನಿತ್ಯ ಸುಖದ ಅನುಭವ ಮಾಡಿಕೊಂಡರು. ಅದಕ್ಕಾಗಿ ಲಿಂಗಪೂಜೆಯ ನಿಜವಾದ ಮರ್ಮವನ್ನು ತಿಳಿದು ಮಾಡಬೇಕು.

(ಕೃಪೆ : ಷಟ್‌ಸ್ಥಲ ಜ್ಞಾನ ಸಾರಾಮೃತ -
ಶ್ರೀ.ತೋಂ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ದುಡಿಮೆಯ ದೇವರು

ಗುಡಿಯ ಕಲ್ಲದೇವರು ನೀವಲ್ಲ
ಬೆಳ್ಳಿ ಬಂಗಾರದ ಪಲ್ಲಕ್ಕಿ ಬೇಕಿಲ್ಲ
ವಜ್ರದುಂಗುರ ಕಿರೀಟದಾಸೆಯಿಲ್ಲ
ಭಕ್ತರು ಕುಣಿವ ಮೆರವಣಿಗೆಯಿಲ್ಲ

ಮನೆಮಂದಿಯ ಮನದ ದೇವರು
ವಿದ್ಯೆ ಕಲಿಸಿ ಬುದ್ಧಿ ಹೇಳಿದ ಗುರು
ತಂದೆತಾಯಾಗಿ ಸಲಹಿದ ಕಲ್ಪತರು
ದೀನದಲಿತರ ಬಂಧು ಸರ್ವಜನ ಮೇರು

ಕಾಲಗಣನೆಯಲಿ ಸೂರ್ಯಚಂದ್ರನೀವು
ಹಗಲಿರುಳು ದುಡಿದರೂ ನೀಗಿಲ್ಲ ನೋವು
ಕೆರೆಯ ನೀರನು ಕೆರೆಗೆ ಚೆಲ್ಲುವ ಮನವು
ಜ್ಞಾನದೇಗುಲಗಳ ನಿರ್ಮಿಸಿದ ದೈವವು

ಮೇಲುಕೀಳಿಲ್ಲ ಜಾತಿ ಮತ ಭಾವವಿಲ್ಲ
ಶರಣ-ತತ್ವ ವಿಚಾರವಲ್ಲದನ್ಯವಿಲ್ಲ
ಎಲ್ಲಜನಧರ್ಮವೊಂದೆನ್ನದೆರಡಿಲ್ಲ
ಕಾಯಕ ಕೈಲಾಸವಲ್ಲದನ್ಯ ನುಡಿಯಿಲ್ಲ

ತ್ರಿವಿಧ ದಾಸೋಹದ ಪವಾಡ ಒಂದೆಡೆ
ತ್ರಿಕರಣ ಪೂರ್ವಕ ದುಡಿಮೆ ಇನ್ನೊಂದೆಡೆ
ಜಗದ ಸರ್ವರುದ್ಧಾರದ ಚಿಂತೆ ಮತ್ತೊಂದೆಡೆ
ಮನದಂತರಂಗದ ದೇವಪೂಜೆಯೊಂದೆಡೆ

ಜಗವೆಲ್ಲ ನಗುತಿರಲೆನುವ ಕಾರುಣ್ಯ ಸಿಂಧುವೆ
ಹುಟ್ಟು ಸಾವಿನ ಮಧ್ಯೆ ಸಾಧನೆಯೇನೆನುವ ಪ್ರಭುವೆ
ನಿಮಗೆ ನಮ್ಮೆಲ್ಲರ ಭಕ್ತಿ ನಮನ ಗುರುವೆ
ನಿಮ್ಮಂತೆ ನಾನಾಗಲೆಂದು ಹರಸು ಬಂಧುವೆ

- ಹ.ಬ. ಮಹದೇವಪ್ಪ







## ಚಿಂತನ

- ಗೊ.ರು. ಚನ್ನಬಸಪ್ಪ,
ಅಧ್ಯಕ್ಷರು,
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು,
ಬೆಂಗಳೂರು-೮೨

**'ಹುಟ್ಟಿ ಹುಟ್ಟಿ ಹೋಗುವುದು ಬಹು ಕಷ್ಟವಯ್ಯ**
**ಕೆಟ್ಟು ಕೆಟ್ಟು ಹೋಗುವುದು ಬೆಟ್ಟದ ಸಾಮರ್ಥ್ಯವಯ್ಯ**
**ಹುಟ್ಟಿ ಹೋದವರು ಕೋಟ್ಯನು ಕೋಟಿ**
**ಕೆಟ್ಟು ಹೋದವರು ಒಬ್ಬರೂ ಇಲ್ಲ ಕಪಿಲಸಿದ್ಧ ಮಲ್ಲಿಕಾರ್ಜುನಾ'**

ಇದು ಶಿವಯೋಗಿ ಸಿದ್ಧರಾಮನ ಒಂದು ಚಿಂತನಪರ ವಚನ.

ಸಿದ್ಧರಾಮನ ಈ ವಚನ ನಮ್ಮನ್ನೂ ಚಿಂತನಕ್ಕೆ ಪ್ರೇರೇಪಿಸುತ್ತದೆ. ಹುಟ್ಟಿ ಹುಟ್ಟಿ ಹೋಗುವುದದು ಬಹು ಕಷ್ಟವಯ್ಯ; ಕೆಟ್ಟು ಕೆಟ್ಟು ಹೋಗುವುದದು ಬೆಟ್ಟದ ಸಾಮರ್ಥ್ಯವಯ್ಯ - ಹುಟ್ಟುವುದೇನು ಕಷ್ಟ? (ಅದು ಹೆರುವವರ ಕಷ್ಟ!) ಇಲ್ಲಿ ಮತ್ತೆ ಮತ್ತೆ ಭವದ ಸಂಕಷ್ಟಕ್ಕೆ ಸಿಕ್ಕುವುದು ಎಂಬ ಅರ್ಥವಿದೆ. 'ಹಾಗೆ ಹುಟ್ಟಿದವರು ಕೋಟ್ಯಾನು ಕೋಟಿ;', 'ಸತ್ತವರೂ ಕೋಟ್ಯಾನು ಕೋಟಿ'. ಆದರೆ ವಚನಕಾರ ಹೇಳುವ 'ಕೆಟ್ಟು ಹೋದವರು ಒಬ್ಬರೂ ಇಲ್ಲ' ಎನ್ನುವ ಮಾತು ತುಂಬ ಅರ್ಥಗರ್ಭಿತ. ಮೇಲ್ನೋಟಕ್ಕೆ ಅದು ವಿರೋಧಾಭಾಸದ ನುಡಿ.

ಸಿದ್ಧರಾಮನ ಕಣ್ಣಿಗೆ ಕೆಟ್ಟು ಹೋದವರು ಸಿಕ್ಕಿರಲಿಕ್ಕಿಲ್ಲ. ನೋಡಲೇ ಬೇಕೆಂದಿದ್ದರೆ ನಮ್ಮ ಕಾಲದವರೆಗೂ ಅವನು ಬದುಕಬೇಕಾಗಿತ್ತು. ಬದುಕಿದ್ದರೆ ನಮ್ಮನ್ನೆಲ್ಲ ನೋಡಿ ಅವನು ವಚನ ತಿದ್ದಿಕೊಳ್ಳುತ್ತಿದ್ದ; 'ಕೆಟ್ಟು ಹೋಗದವರು ಒಬ್ಬರೂ ಇಲ್ಲ' ಎಂದು. ಆದರೆ ಇಲ್ಲಿ ಕೆಟ್ಟು ಹೋಗುವುದೆಂದರೆ ಇಹದ ಬಂಧನ ಕಳಚಿಕೊಂಡಿರುವ ಎಂದರ್ಥ. ಸಾಯುವ ಮುನ್ನವೇ ಸಾಯಬೇಕಾದ ಒಂದು ಸುಖದ ಅವಸ್ಥೆ. ಅದೇ ಸಿದ್ಧರಾಮ ಮತ್ತೊಂದು ವಚನದಲ್ಲಿ -

**ಸಂಸಾರ ತೆಪ್ಪದೊಳಗೆ ಆನೀಗ ಅದಿ**
**ತೊಳಲುತ್ತ ಬಳಲುತಿಪ್ಪೆನಯ್ಯ ಬೇಗ ಬಾರಾ ಬಾರಾ ಅಯ್ಯ,**
**ವಜ್ರಲೇಪದಲ್ಲಿ ಬಿದ್ದಿದ್ದೇನೆ**
**ಬೇಗ ಬಂದೆತ್ತಯ್ಯ, ಹೆತ್ತಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಾ!**

ಈ ಬಿಡುಗಡೆಯ ಹಂಬಲ ನಮಗೆ ಬರಬೇಕು.

ಶರಣರು ಸಂಸಾರವನ್ನು ತ್ಯಾಜ್ಯವೆಂದಿಲ್ಲ, ಆದರೂ 'ಇದ್ದೂ ಇಲ್ಲದಂತಿರಬೇಕು' ಎನ್ನುತ್ತಾರೆ. ಸಂಸಾರ ಕೇವಲ ಸ್ವಾರ್ಥದ ಮುದ್ದೆಯಾಗಬಾರದು. ಸಮಾಜ ಸೇವೆಯ ಮಾಧ್ಯಮ ವಾಗಬೇಕು. ಆಗ ಸಂಸಾರದ ಬದುಕು ಸಾರ್ಥಕವಾಗುತ್ತದೆ.

ಇಲ್ಲಿ ಸಂಸಾರವೆಂದರೆ ಕೇವಲ ಹೆಂಡಿರು ಮಕ್ಕಳೆಂಬ ಅರ್ಥಕ್ಕೆ ಸೀಮಿತವಲ್ಲ. ನಮ್ಮ ಎಲ್ಲ ಜೀವಗುಣಗಳಿಗೂ ಲೋಕ ವ್ಯವಹಾರಗಳಿಗೂ ಅನ್ವಯಿಸುತ್ತದೆ. ಹೆಂಡತಿ ಮಕ್ಕಳನ್ನು ಹಚ್ಚಿಕೊಳ್ಳುವುದು ಸಂಸಾರವೆಂದಾದರೆ, ಭೌತಿಕವಾದ ಯಾವುದೇ ವಸ್ತುಗಳನ್ನು ಹಚ್ಚಿಕೊಳ್ಳುವುದೂ ಒಂದು ಸಂಸಾರವೇ. ಅದು ಗಂಡು ಹೆಣ್ಣಿರಬಹುದು, ಹೊನ್ನಿರಬಹುದು ಅಥವಾ ಮಣ್ಣಿರಬಹುದು. ಇವುಗಳ ಮಮಕಾರ, ಇವುಗಳನ್ನು ಪಡೆಯಲು ಪಡುವ ಪಾಡು, ದೊರಕಿದಾಗ ಪಡುವ ಅಹಂಕಾರ, ಕಳೆದುಕೊಂಡಾಗ ಅನುಭವಿಸುವ ಯಾತನೆ - ಇವೆಲ್ಲ ಸಂಸಾರದ ಅನುಭವಗಳು. ಇವುಗಳಿಂದ ಸುಖಕ್ಕಿಂತ ದುಃಖವೇ ಹೆಚ್ಚು. ಇವುಗಳ ನಿರ್ಲಿಪ್ತತೆಗೆ ಒಂದು ಸುಂದರ ಉದಾಹರಣೆಯನ್ನು ನಮ್ಮ ಶರಣರ ಜೀವನದಿಂದ ಕೊಡಬಯಸುತ್ತೇನೆ;

ಮೋಳಿಗೆ ಮಾರಯ್ಯನೆಂಬೊಬ್ಬ ಶರಣ ತನ್ನ ಕಾಯಕದಲ್ಲಿ ನಿರತನಾಗಿದ್ದ. ಅವನು ಒಬ್ಬ ಸಂಸಾರಿ. ಅವರದು ಜೇಡರ ದಾಸಿಮಯ್ಯ ಹೇಳುವ 'ಸತಿ-ಪತಿಗಳೊಂದಾದ' ಭಕ್ತಿ. ಒಮ್ಮೆ ಈ ಶರಣನ ಸತ್ವಪರೀಕ್ಷೆಗೆಂದೇ ಬಸವಣ್ಣನವರು ಮಾರಯ್ಯನ ಮನೆಗೆ ಬರುತ್ತಾರೆ. ಆಗ ಆತ ಮನೆಯಲ್ಲಿರಲಿಲ್ಲ. ಬಸವಣ್ಣನವರು ಆತನ ಹೆಂಡತಿಯ ಕ್ಷೇಮ ವಿಚಾರಿಸಿ ಅವನ ಮನೆಯಲ್ಲಿ ಹಣದ ಚೀಲವೊಂದನ್ನಿರಿಸಿ ಹೋಗುತ್ತಾರೆ. ಸ್ವಲ್ಪ ಹೊತ್ತಿನ ನಂತರ ಮಾರಯ್ಯ ಮನೆಗೆ ಬಂದಾಗ, ಅವನ ಮಡದಿ ನಡೆದ ಘಟನೆಯನ್ನು ವರದಿ ಮಾಡುತ್ತಾಳೆ. ಬಸವಣ್ಣನವರು ಮನೆಗೆ ಬಂದಿದ್ದರೆಂಬ ಹಿಗ್ಗು ಆಕೆಯದು. ಆದರೆ ಅವಳ ಮಾತನ್ನು ಕೇಳಿದ ಮಾರಯ್ಯ -

'ರೊಕ್ಕ ಹೆಚ್ಚಿತೆ ಅವಗೆ ಸೊಕ್ಕು ಬಂದಿತೆ?
ಇಕ್ಕಿ ಹೋದನೆ ಬಸವ ಮನೆಯೊಳಗೆ
ಹೆಚ್ಚು ಎಂದರೆ ಬೆಂಕಿ ಹಚ್ಚಬಾರದೆ?
ಅಚ್ಚ ಶರಣೆಯೆ ಹೊರಗೆ ಬೀಸಾಡು'

ಎಂದನಂತೆ. ಧರ್ಮಿಷ್ಠ ಹೆಂಡತಿ, ಅನುಕೂಲ ಸತಿ. ಗಂಡನ ಮಾತಿಗೆ ಮರುಮಾತಾಡದೆ ಹೊರಗೆ ಹೋಗಿ ಆ ಹಣವನ್ನು ಎಸೆದು ಬರುತ್ತಾಳೆ. ಆದರೆ ಮಾರಯ್ಯ ಅಷ್ಟಕ್ಕೇ ಬಿಡಲಿಲ್ಲ. 'ಮಲವು ಸೋಂಕಿತು ನೆಲವ ಸಾರಿಸು' ಎಂದು ಹೆಂಡತಿಗೆ ಹೇಳುತ್ತಾನೆ. ಅದರಂತೆ ಅವಳು ನೆಲ ಸಾರಿಸುತ್ತಾಳೆ. ಈ ಪ್ರಸಂಗವನ್ನು ನಮ್ಮ ಕಾಲದ ಜನ ಊಹೆಮಾಡುವುದೂ ಕಷ್ಟವಾಗಬಹುದು. ಗಂಡ ಗಂಟು ತರಲಿಲ್ಲವೆಂದು ಮುನಿಸಿಕೊಂಡು ಮೂಲೆಯಲ್ಲಿ ಕೂರುವ ಮಹಿಳೆಯರೆತ್ತ? ಆಕಸ್ಮಿಕವಾಗಿ ಒದಗಿಬಂದ ಹಣವನ್ನು ಗಂಡ ಹೇಳಿದ ಕೂಡಲೇ ಹೊರಚೆಲ್ಲಿದ ಆ ಶರಣೆಯೆತ್ತ? ಇದು ಸಂಸಾರ ನಿರ್ಲಿಪ್ತತೆ.

ಸಿದ್ಧರಾಮನ ದೃಷ್ಟಿಯ 'ಕೆಟ್ಟು ಹೋಗುವು'ದಕ್ಕೆ ನಾವು ಚಿಂತನ ಮಾಡಬೇಕಾಗಿದೆ. ಶರಣರು ಮಹಾ ಚಿಂತಕರು. ಅವರ ಚಿಂತನೆಗೆ ಸಂಸಾರವೆಂದೂ ಅಡ್ಡಬರುವುದಿಲ್ಲ. ಸನ್ಯಾಸಿಯಿರಲಿ, ಸಂಸಾರಿಯಿರಲಿ ಬದುಕಿನ ನೆಮ್ಮದಿಗೆ ಚಿಂತನ ಅಗತ್ಯ. ನಾನು ಮೊದಲೇ ಹೇಳಿದಂತೆ ಚಿಂತನ ಒಂದು ವಿಚಾರ ಮಂಥನ. ಅನುಭಾವದ ಅರಿವಿನ ಹಸಿವುಳ್ಳವರೆಲ್ಲ ಈ ಚಿಂತನದಲ್ಲಿ ಪಾಲುಗೊಳ್ಳಬೇಕು. ಹನ್ನೆರಡನೆಯ ಶತಮಾನದ ಅನುಭವ ಮಂಟಪ ನಿಜವಾದ ಅರ್ಥದಲ್ಲಿ ಒಂದು ಚಿಂತನ ವೇದಿಕೆಯಾಗಿತ್ತು. ಅಲ್ಲಿ ನಡೆಯುತ್ತಿದ್ದುದು ಅನುಭಾವ ಗೋಷ್ಠಿ. ಅದು ಚಿಂತನಗೋಷ್ಠಿಯಲ್ಲದೆ ಬೇರೆಯಲ್ಲ.

ಅನುಭಾವ ಗೋಷ್ಠಿಯಲ್ಲಿ ಪಾಲುಗೊಳ್ಳುತ್ತಿದ್ದವರು ಶರಣರು. ಅಂತಹ ಶರಣರ ಸಂಗವೇ ಒಂದು ಅಮೂಲ್ಯ ಲಾಭ. ಶರಣರ ಸಂಗದ ಮಹತ್ವವನ್ನು ಶರಣರ ಮಾತುಗಳಿಂದಲೇ ಅರಿಯಬಹುದು. 'ಕೂಡಲ ಸಂಗಮದೇವರನರಿವಡೆ ಶರಣರ ಸಂಗವೆ ಮೊದಲು' ಎನ್ನುತ್ತಾಳೆ ಅಕ್ಕಮಹಾದೇವಿ. 'ಶರಣರ ಸಂಗ ಸುಖದೊಳಗೆನ್ನನಿರಿಸಯ್ಯ' ಎನ್ನುವುದು ಹಡಪಪ್ಪಣ್ಣನ ಮಾತು. 'ಪರಮ ಸುಖ ಪರಿಣಾಮಕ್ಕೆ ಮಹಾನುಭಾವಿಗಳ ಸಂಗವೇ ಬೇಕು' ಎಂದು ಶಂಕರದಾಸಿಮಯ್ಯ ಹೇಳುತ್ತಾನೆ. 'ಶಿವಾನುಭಾವ ಶಿವಶರಣರ ಸಂಗವನೆ ಕರುಣಿಸಿ ಬದುಕಿಸಯ್ಯ' ಎಂದು ಅಖಂಡೇಶ್ವರರು ಹೇಳುತ್ತಾರೆ. ಹೀಗೆ ಶರಣರ ಸಂಗವೇ ಚಿಂತನಕ್ಕೆ ಪ್ರೇರಣೆ ನೀಡುತ್ತದೆ. ಆ ಚಿಂತನದ ಅನುಭವ ಒಂದು ಅನಿರ್ವಚನೀಯ ಆನಂದವನ್ನು ನೀಡುತ್ತದೆ. ●

**ಪ್ರತಿಪಾದನೆ ಪ್ರಮಾಣವಾದವಲ್ಲ; ಎದುರಾಳಿಯ ಹೇಳಿಕೆಯನ್ನು ವಿರೋಧಿಸುವುದು ನೀನು ಸರಿ ಎನ್ನುವುದಕ್ಕೆ ಪ್ರಮಾಣವಲ್ಲ.**

**- ಜಾನ್ಸನ್**

## ನಿಮಗಿದು ತಿಳಿದಿರಲಿ

| | | |
|---|---|---|
| ಅಂತಃಕರಣ ಚತುಷ್ಟಯ | - | ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ |
| ಅಕ್ಷೌಹಿಣೀ | - | ೨೧,೮೭೦ ರಥಗಳು, ೨೧,೮೭೦ ಆನೆಗಳು, ೬೫,೬೧೦ ಕುದುರೆಗಳು, ೧,೦೯,೩೫೦ ಕಾಲಾಳುಗಳು |
| ಅಗ್ನಿತ್ರಯ | - | ಗಾರ್ಹಪತ್ಯ, ದಕ್ಷಿಣ, ಅಹವನೀಯ. |
| ಅರಿಷಡ್ವರ್ಗಗಳು | - | ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ |
| ಅಷ್ಟದಿಕ್ಕುಗಳು | - | ಪೂರ್ವ, ಆಗ್ನೇಯ, ದಕ್ಷಿಣ, ನೈರ್ ಋತ, ಪಶ್ಚಿಮ, ವಾಯವ್ಯ, ಉತ್ತರ, ಈಶಾನ್ಯ |
| ಅಷ್ಟದಿಗ್ಗಜಗಳು | - | ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕ. |
| ಅಷ್ಟ ಭೋಗಗಳು | - | (ಅ). ಅನ್ನ, ಉದಕ, ತಂಬೂಲ, ಪುಷ್ಪ, ಚಂದನ, ವಸತಿ, ಶಯ್ಯೆ, ಅಲಂಕಾರ.<br>(ಆ). ನಿಧಿ, ನಿಕ್ಷೇಪ, ಜಲ, ಪಾಷಾಣ, ಅಕ್ಷೀಣಿ, ಆಗಾಮಿ, ಸಿದ್ಧ, ಸಾಧ್ಯ. |
| ಅಷ್ಟ ಮಂಗಲ | - | ಛತ್ರ, ಧ್ವಜ, ಕಲಶ, ಚಾಮರ, ಸುಪ್ರತಿಷ್ಠಕ (ಪೂಜಾದ್ರವ್ಯಗಳನ್ನಿಡುವ ಒಂದು ಬಗೆಯ ಪಾತ್ರೆ), ಭೃಂಗಾರ (ಗಿಂಡಿ), ದರ್ಪಣ (ಕನ್ನಡಿ), ತಾಲ (ಬೀಸಣಿಗೆ). |
| ಅಷ್ಟ ಮದಗಳು | - | ಧನ, ಕುಲ, ವಿದ್ಯಾ, ರೂಪ, ಯೌವನ, ಬಲ, ಪರಿವಾರ, ಅಧಿಕಾರ |
| ಅಷ್ಟಮೂರ್ತಿಗಳು | - | ಭವ, ಶರ್ವ, ಈಶಾನ್ಯ, ಪಶುಪತಿ, ಭೀಮ, ಉಗ್ರ, ಮಹಾದೇವ, ರುದ್ರ. |





# ಅನುಭಾವವೇ ಅಲ್ಲಮ

- ಪ್ರೊ. ಎಸ್. ಅನಂತನಾರಾಯಣ

ಅಲ್ಲಮ ಪ್ರಭುದೇವ ಒಮ್ಮೆ ಪಯಣದಲ್ಲಿ ತೊಡಗಿದ್ದಾಗ ನಡೆದ ಘಟನೆಗಳಲ್ಲಿ ಬಹು ಮುಖ್ಯವಾದುದು ಗೋರಕ್ಷನೊಂದಿಗೆ ನಡೆದ ಪರೀಕ್ಷಣ. ಶ್ರೀಶೈಲ ಕ್ಷೇತ್ರದ ಬಳಿಗೆ ಅಲ್ಲಮ ಬಂದಾಗ ಅಲ್ಲಿ ಸಿದ್ಧರೂ ಸಾಧಕರೂ ಎದುರಾದರು. ಅಂತಹ ಸಾಧಕರಲ್ಲಿ ಗೋರಕ್ಷ ಪ್ರಚಂಡ ಯೋಗಶಕ್ತಿಯಿಂದ ಅನೇಕಾನೇಕ ಸಿದ್ಧಿಗಳನ್ನು ಪಡೆದಿದ್ದು ಪ್ರಖ್ಯಾತನಾಗಿದ್ದ. ಆತನ ಅಹಂಕಾರ ದೇಹದ ಮಮಕಾರದಲ್ಲಿ ಮೂರ್ತಿವೆತ್ತಿತ್ತು. ಕಾಯವೇ ಸರ್ವಸ್ವವೂ ಎಂದು ನಂಬಿದ್ದ ಆತ. ಸಾಧನೆಯ ಫಲವಾಗಿ ದೇಹವನ್ನು ವಜ್ರಕ್ಕಿಂತಲೂ ಗಟ್ಟಿಗಡುಸಾಗಿಸಿಕೊಂಡಿದ್ದ. ತನ್ನ ದೇಹವೇ ಎಲ್ಲವೂ ಎಂದೇ ನಂಬಿದ್ದ ಗೋರಕ್ಷ ಆ ದೇಹದ ಪೋಷಣೆಗೇ ತನ್ನ ಸಿದ್ಧಿಗಳನ್ನು ಪರಿಮಿತಿಗೊಳಿಸಿಕೊಂಡು - ಈ ನಶ್ವರ ದೇಹವನ್ನು ತಾನು ಶಾಶ್ವತಗೊಳಿಸಿಕೊಂಡಿದ್ದೇನೆ ಎಂಬ ಭ್ರಮೆಯಲ್ಲಿದ್ದು, ಆತ್ಮದ ಅರಿವು ಕೂಡ ಇಲ್ಲದ ಅಂಧಕಾರದಲ್ಲಿದ್ದ. ಇಂತಹ ಗೋರಕ್ಷನಿಗೆ ಅಲ್ಲಮನಂತಹ ಜಂಗಮ - ಬಡಕಲು ದೇಹದ ಸನ್ಯಾಸಿಯ ಬಗ್ಗೆ ಗೌರವವಾದರೂ ಎಲ್ಲಿ! ಅಲ್ಲಮನನ್ನು ಕಂಡ ಗೋರಕ್ಷ ಪ್ರಾಯಶಃ ಮೊದಲು ತಿರಸ್ಕಾರದಿಂದ ಅನಂತರ ಈ ಜಂಗಮನ ದಿಟ್ಟ ನಿಲುವಿಗೆ ಬೆರಗಾಗಿ ಸ್ವಲ್ಪಮಟ್ಟಿನ ಗೌರವದಿಂದ ಅಲ್ಲಮನನ್ನು ಮಾತನಾಡಿಸಿರಬೇಕು. ಕೊಳಚೆ, ಎಲುವು ಮಾಂಸಗಳ ದೇಹದ ಬಗ್ಗೆ ಅಷ್ಟೊಂದು ವ್ಯಾಮೋಹವಿದ್ದ ಗೋರಕ್ಷನನ್ನು ಆತ್ಮಸಾಕ್ಷಾತ್ಕಾರದ ಹಾದಿಗೆ ತರುವಲ್ಲಿ ಅಲ್ಲಮ ತೋರಿದ ಆಸಕ್ತಿಯ ಜತೆಗೆ ಈ ಘಟನೆ, ಇದ್ದರೂ ಇಲ್ಲದಂತಿದ್ದ ಅಲ್ಲಮನ ಅನುಭಾವದ ವ್ಯಕ್ತಿತ್ವದ ಸಾಕ್ಷಿ. ತನ್ನ ದೇಹಕ್ಕೇನೂ ಗಾಸಿಯಾಗದೆಂದು ಹೇಳಿ ಗೋರಕ್ಷ ಅಲ್ಲಮನ ಕೈಗೆ ಕತ್ತಿ ಕೊಟ್ಟು ಹೊಡೆಯಲು ಹೇಳಿದ. ಕತ್ತಿ ಮೈಮೇಲೆ ಬಿದ್ದಾಗ ಖಣೆಲ್ ಖಣೆಲ್ ಎಂದು ಶಬ್ದ ಮಾಡಿಕೊಂಡು ಹಿಂದಕ್ಕೆ ಪುಟಿಯುತ್ತಿತ್ತು. ತನ್ನ ದೇಹ ಎಲ್ಲ ಗಾಸಿಗಳನ್ನೂ ಮೀರಿದೆ - ಮೃತ್ಯುವನ್ನು ದಾಟಿದೆಯೆಂದು ಗೋರಕ್ಷ ಬೀಗಿದ. ಆದರೆ ಇದು ಕೇವಲ ಕ್ಷುದ್ರಸಿದ್ಧಿಯೆಂದು ಅವನಿಗೆ ತೋರಿಕೊಡಲು ಅಲ್ಲಮ - ತನ್ನ ಮೇಲೆ ಕತ್ತಿ ಬೀಸುವಂತೆ ಗೋರಕ್ಷನಿಗೆ ಹೇಳಿದ. ಜಂಗಮನನ್ನು ಕೊಲ್ಲಲು ಹಿಂದೆಗೆದ ಗೋರಕ್ಷ. ಅವನಲ್ಲಿ ಆತ್ಮದ ಬೆಳಕಿನ ಕುಡಿ ಇತ್ತೆಂಬುದಕ್ಕೆ ಇದೊಂದು ಸಾಕ್ಷಿ. ಆಗ ಅಲ್ಲಮನ ಬಲವಂತಕ್ಕೆ ಗೋರಕ್ಷ ಕತ್ತಿಯನ್ನು ಬೀಸಿದಾಗ, ಕತ್ತಿ ದೇಹವನ್ನು ತೂರಿಕೊಂಡು ಈಚೆಗೆ ಬಂತು. ಅಲ್ಲಮ ಅಂತೆಯೇ ನಿಂತೇ ಇದ್ದ. ಶೂನ್ಯದಲ್ಲಿ ಕತ್ತಿ ತಾರಾಡಿದಂತಿತ್ತು - ಬಯಲಲ್ಲಿ ಬಾಳನ್ನು ಆಡಿಸಿ ಬಳಲಿದ ಗೋರಕ್ಷನಿಗೆ ಕಾಯದ ವ್ಯಾಮೋಹ ತಪ್ಪಿಸಿದ ಅಲ್ಲಮ. ಇಲ್ಲಿ ಬಹು ಮುಖ್ಯವಾಗಿ ಅರಿಯುವುದು ಅಲ್ಲಮನ ಅನುಭಾವ - ದೇಹವು ಇದ್ದರೂ ಇಲ್ಲದಂತೆ-ನೇತಿ-ನೇತಿ ಅದು ಅಲ್ಲ. ಅಲ್ಲವೆಂದೇ ಅಲ್ಲಮನಾದ ಈ ವ್ಯಕ್ತಿತ್ವ ತನುಕರಗಿ ಶಿವನಲ್ಲಿ ಬೆರೆತಾಗ ಇದ್ದರೂ ಇಲ್ಲದಂತೆಯೇ ಅಲ್ಲವೇ? ಕಾಯದ ಕಟ್ಟಳೆಗೆ ಸಿಲುಕಿದ ವ್ಯಕ್ತಿಗೆ ಜಡಗಜಗತ್ತಿಗೆ ಬಂದಿಯಾಗಿ ಸಿಲುಕಿಕೊಂಡ ಬಗೆ ಇರುತ್ತದೆ. ಆದರೆ ಕಾಯದ ಕಟ್ಟಳೆಯನ್ನು ಮೀರಿದ ವ್ಯಕ್ತಿಗೆ ದೇಹವು ಇದ್ದರೂ ಇಲ್ಲದಂತೆ ಆಗುವ ವ್ಯಕ್ತಿಗೆ ಕಾಯದ ಸಂಕೋಲೆಯೆಲ್ಲಿ! ಹಾಗೆ ನೋಡಿದಲ್ಲಿ ಕಾಯವೇ ಕಾಲದ ಮಾಪಕವಾಗುತ್ತದೆ - ದಿನಗಳೆದಂತೆ ಕಾಲ ಉರುಳಿತೆಂದು ತೋರುವುದೇ ಕಾಯ. ಈ ಕಾಯದ ಕಟ್ಟಳೆಯನ್ನು ಮೀರಿದವನು ಕಾಲದ ಕಟ್ಟಳೆಯನ್ನು ಮೀರುತ್ತಾನೆ. ಆಗ ಕಾಲದ ಕಟ್ಟು ಕಳಚಿ ಕಾಲಾಂತಕನಾದ ಶಿವನಲ್ಲಿ ಒಂದಾದ ಅನುಭಾವಿಯಾಗುತ್ತಾನೆ. ಇಂತಹ ಅನುಭಾವಿಗಳ ಬಗ್ಗೆಯೇ ಅಲ್ಲಮ ಒಂದು ಕಡೆಯಲ್ಲಿ ಹೇಳಿರುವುದು ಗಮನಾರ್ಹ-

ಅಲ್ಲಮನಿಗಾಗಿ ಬಸವಣ್ಣ ಆರೋಗಣೆಯನ್ನು ಸಿದ್ಧಪಡಿಸಿ ಒತ್ತಾಯಿಸಿದಾಗ ಅಲ್ಲಮ ನುಡಿದ ಮಾತು ಈ ವಚನ.

**ಕಾಯದಲ್ಲಿ ಕಾಯ ಸವೆದು, ಪ್ರಾಣದಲ್ಲಿ ಪ್ರಾಣ ಸವೆದು**
**ನಿಶ್ಚಿಂತವಾದ ಬಳಿಕ ಹಸಿವು ತೃಷೆಗಳೆಂಬುವು**
**ಅಳಿದು ಹೋದುವು ಕೇಳಾ; ಉಂಡೆವೆಂಬ ಬಯಕೆಯೂ ಇಲ್ಲ**
**ಒಲ್ಲೆನೆಂಬ ವೈರಾಗ್ಯವೂ ಇಲ್ಲ. ಇದು ಸ್ವಭಾವ ತೃಪ್ತಿಯೊಳಡಗಿತ್ತು!**

ಇಲ್ಲಿನ ಮಾತುಗಳನ್ನು ಗಮನಿಸಿದಾಗ ಬೇಕೆಂಬುದೂ ಇಲ್ಲ, ಬೇಡವೆಂಬುದೂ ಇಲ್ಲದ ತೃಪ್ತಿಯ ಸ್ಥಿತಿ ಬಂದುದು ಆತಕ್ಕೆ ಆತ್ಮ-ಲಿಂಗಾಂಗ ಸಾಮರಸ್ಯದಲ್ಲಿ ಬೆರೆತಾಗ ಎಂಬುದು ಸ್ಪಷ್ಟವೆನಿಸುತ್ತದೆ. ಇಂತಹ ಸ್ಥಿತಿಯನ್ನೇ ಅನುಭಾವವೆನ್ನುವುದು. ತನುವಿನಲ್ಲಿ ಆಸಕ್ತಿಯಿರುವವರೆಗೆ ಹಸಿವೆ, ತೃಷೆ ಮುಂತಾದುವು - ಅವುಗಳನ್ನು ಪೂರೈಸುವ ಚಿಂತೆ. ಇದರಿಂದಾಗಿ ತನುವಿನಲ್ಲಿ ಮನವಿಟ್ಟಾಗ ತಾನು, ತಾನು ಎಂಬುದೇ ನಾಡಿ ನಾಡಿಯಲ್ಲೂ ಮಿಡಿಯುವ ತಾನವಾಗುತ್ತದೆ. ಆದರೆ ತನುವಿನ ಮೋಹ ಕಳೆದಾಗ - ಕಾಯದಲ್ಲಿ ಕಾಯವೇ ಸವೆದಾಗ, ಪ್ರಾಣದಲ್ಲಿ ಪ್ರಾಣ ಬೆರೆತಾಗ **'ತಾನುತನ'** ಹೋಗುತ್ತದೆ. ಆಗ - **'ನಾ' 'ನಾ'** ಎಂಬುದು ಅಳಿದು. **'ನಾನಾ'** ಎಂಬುದೂ ಅಳಿಯುತ್ತದೆ. ಆಗ ಎಲ್ಲವೂ ಒಂದೇ ಆಗಿ - ಅನುಭಾವದ ಪಾರಮ್ಯ ತೋರಿಕೊಳ್ಳುತ್ತದೆ. ಅಂತಹ ಸ್ಥಿತಿಯಲ್ಲಿ

ಉಳಿದವರು ಮಾಡುವಂತಹ ಪೂಜೆ ಕೂಡ ಅನಗತ್ಯವಾಗುತ್ತದೆ.

*ಗಗನವೇ ಗುಂಡಿಗೆ, ಆಕಾಶವೇ ಅಗ್ಗವಣಿ*
*ಚಂದ್ರ ಸೂರ್ಯರಿಬ್ಬರು ಪುಷ್ಪ, ಬ್ರಹ್ಮ ಧೂಪ*
*ವಿಷ್ಣುದೀಪ, ರುದ್ರನೋಗರ; ಸುಯಿಧಾನ ನೋಡಾ*
*ಗುಹೇಶ್ವರಲಿಂಗಕ್ಕೆ ಪೂಜೆ ನೋಡಾ.*

ಸಮಸ್ತ ಚರಾಚರ ವಸ್ತುಗಳ ಎಲ್ಲ ಕ್ರಿಯೆಯೂ ಗುಹೇಶ್ವರನ ಪೂಜೆಯಾಗಿ ವಿಜೃಂಭಿಸಿದಾಗ ಕಾಲದ ಕಾಯದ ಪರಿಮಿತಿಗೊಳಪಟ್ಟ ಪೂಜೆಯಾದರೂ ಏಕೆ? ಕೇವಲ ಸಂಕೇತವಾಗಿ ಮಾತ್ರ ಈ ಪೂಜೆ ಉಳಿಯಬಲ್ಲುದು ಅಷ್ಟೇ - ಕರ್ಪೂರವು ತನ್ನನ್ನು ತಾನೇ ಬೆಳಕಿಗೆ ಸಮರ್ಪಿಸಿಕೊಂಡು ಬಯಲಲ್ಲಿ ಬಯಲಾದಾಗ ಉರುವು ಕೂಡ ಉಳಿಯುವುದಿಲ್ಲ. ಬಯಲಲ್ಲಿ ಬಯಲಾದ ಮೇಲೆ ಬೇರೆಲ್ಲಿಯ ಬವಣೆ - ದೃಕ್ ದೃಶ್ಯಗಳೆರಡೂ ಬೆರೆತಾಗ ದರ್ಶನವೇ ಪ್ರಾಪ್ತಿಯಲ್ಲವೇ - ಈ ದರ್ಶನವನ್ನೇ ಅನುಭಾವದ ಅಂತರಾಳವೆನ್ನುವುದು. ದರ್ಶನ ಪ್ರಾಪ್ತವಾದವನು ಅದರಲ್ಲಿಯೇ ಒಂದಾದಾಗ ಸಾಮಾನ್ಯ ಆಚರಣೆಗಳಿಗೇನೂ ಅರ್ಥವಿಲ್ಲವೆಂಬುದು ಅಲ್ಲಮ ಇಲ್ಲಿ ತೋರಿದ ತತ್ವ.

ಸಿದ್ಧರಾಮನನ್ನು ಪರೀಕ್ಷಿಸುವಾಗಲೂ ಅಲ್ಲಮ ಇದೇ ಬಗೆಯನ್ನೆ ತೋರುವುದನ್ನು ನೋಡಬಹುದು.

*ಕೆರೆದೇಗುಲಂಗಳೆಲ್ಲವೂ ಹಿಂದಣ ಅಡಿವಜ್ಜೆಗೊಳಗು*
*ಕರ್ಮಕಾಂಡ ಯೋಗಂಗಳೆಲ್ಲವೂ ಭವದ ತೆಕ್ಕೆಗೆ ಒಳಗು*

ಎಂದು ಸಿದ್ಧರಾಮನಿಗೆ ಅಲ್ಲಮ ಬೋಧಿಸುವ ಅರ್ಥವೂ ಇದೆ. ದುಡಿಮೆಯೇ ದೇವರೆಂಬುದೂ ಒಂದು ಮಾಯೆಯಾಗಿಯೇ ಕಟ್ಟಳೆಯಾಗಿಬಿಡುತ್ತದೆ - ಕಾರಣ ತಾನು ದುಡಿಯುತ್ತಿದ್ದೇನೆ - ಅದು ಪರಮಸೇವೆಯೆಂಬ ಅಹಮಿಕೆಯು ಮುತ್ತಿ ಮಾಯೆಯಾಗಿ ಆವರಿಸಿಕೊಳ್ಳುತ್ತದೆ. ಅದನ್ನು ಮೀರಬೇಕು ವ್ಯಕ್ತಿ-ಆಗಲೇ ಅರಿವು-

*ದೇಹಭಾವವಳಿಯದೆ ಜೀವಭಾವವಳಿಯದು*
*ಜೀವಭಾವವಳಿದಲ್ಲದೆ ಭಕ್ತಿಭಾವವಳವಡದು*
*ಭಕ್ತಿಭಾವವಳವಟ್ಟಲ್ಲದೆ ಅರಿವು ತಲೆದೋರದು*
*ಅರಿವು ತಲೆದೋರಿದಲ್ಲದೆ ಕುರುಹು ನಷ್ಟವಾಗದು*
*ಕುರುಹು ನಷ್ಟವಾದಲ್ಲದೆ ಮಾಯೆ ಹಿಂಗದು*
*ಇದು ಕಾರಣ ಕಾಯದ ಜೀವದ ಹೊಲಿಗೆಯಳಿದ ಭೇದವ*
*ತಿಳಿಯಬಲ್ಲರೆ, ಗುಹೇಶ್ವರಲಿಂಗದ ಅರಿವು ಸಾಧ್ಯವಪ್ಪುದು.*

ಎಂದು ಅಲ್ಲಮ ಸಿದ್ಧರಾಮನಿಗೆ ಬೋಧಿಸುತ್ತಾನೆ. ಹೆಣ್ಣಿಗೆ ಗಂಡಾಗಿ, ಗಂಡಿಗೆ ಹೆಣ್ಣಾಗಿ ಕಾಡುತ್ತದೆ ಮಾಯೆ. ಈ ಮಾಯೆಯ ಹೊರಗಿನ ಕುರುಹೇ ದೇಹದ ಕುರುಹು - ಈ ಕುರುಹು ಅಳಿಯಬೇಕಾದರೆ ಅಲ್ಲಮ ಹೇಳುವಂತೆ ಭಕ್ತಿಭಾವ ಉದಿಸಬೇಕು - ದೇಹಭಾವ, ಜೀವಭಾವಗಳು ಅಳಿಯಬೇಕು.

ಇಂತಹುದೇ ಪ್ರಸಂಗ ಅಕ್ಕಮಹಾದೇವಿಯನ್ನು ಅಲ್ಲಮ ಪರೀಕ್ಷಿಸುವ ಬಗೆ. ಎಲ್ಲವನ್ನು ತೊರೆದು ದಿಗಂಬರ ದಿವ್ಯಾಂಬರದಲ್ಲಿ ಬಂದ ಅಕ್ಕಮಹಾದೇವಿ ತನ್ನ ನೀಳಕೂದಲಿನಲ್ಲಿ ಮೈಮುಚ್ಚಿಕೊಂಡು ಕಲ್ಯಾಣಕ್ಕೆ ಬಂದಾಗ, ಅವಳ ಗರಿಮೆಯನ್ನರಿತ ಮಹಾಮನೆಯ ಶರಣರೆಲ್ಲ ಅವಳನ್ನು ಸ್ವಾಗತಿಸಲು ಸಿದ್ಧರಾಗಿರುತ್ತಾರೆ. ಆಗ ಅಲ್ಲಮ ಮಾತ್ರ ಅವಳ ನಿಷ್ಕಳಂಕ ನಿಜಾತ್ಮವನ್ನು ಪ್ರಕಟಿಸುವುದಕ್ಕಾಗಿಯೇ ಅವಳನ್ನು ಕಠಿಣ ಪರೀಕ್ಷಣಕ್ಕೊಳಪಡಿಸುತ್ತಾನೆ. ಅವಳ ಯೌವನವನ್ನು ಕುರಿತು, ದೇಹಭಾವವನ್ನು ಕುರಿತು ಅಲ್ಲಮ ಕೆಣಕು ಮಾತನ್ನಾಡುತ್ತಾನೆ. ಆ ದೇಹದ ಮೇಲಿನ ವ್ಯಾಮೋಹವಿಲ್ಲದಿದ್ದರೆ, ದೇಹದ ಕುರುಹೇ ಮಾಯೆಯಾಗಿ ಕಾಡದಿದ್ದರೆ ಈ ಬತ್ತಲನ್ನು ಮುಚ್ಚುವ ಪ್ರಯತ್ನವೇಕೆಂದು ಕೇಳಿದ್ದೇ ಅಲ್ಲದೆ, ಕೌಶಿಕನೊಂದಿಗೆ ವಿವಾಹವಾಗಿದ್ದರೂ ಚೆನ್ನಮಲ್ಲಿಕಾರ್ಜುನನೇ ಪತಿಯೆಂದು ಸಾರುವುದು ಅವಳ ಔದ್ಧತ್ಯವಲ್ಲವೇನೆಂದೂ ಜರಿಯುತ್ತಾನೆ. ಆಗ ಅವಳು ದಿಟ್ಟತನದಿಂದ ಉತ್ತರಕೊಟ್ಟು ತನಗಾಗಿ ಈ ಕೇಶದ ಮರೆಯಲ್ಲ - ಉಳಿದವರಿಗಾಗಿ - ದೇಹದ ಕುರುಹನ್ನು ಮೀರದವರಿಗಾಗಿ ಎನ್ನುತ್ತಾಳೆ. "ಅಂತರಂಗದ ನಾಚಿಕೆ ಬಹಿರಂಗದಲ್ಲಿ ತೋರುತ್ತದೆ. ಇದು ನಮ್ಮ ಗುಹೇಶ್ವರಲಿಂಗಕ್ಕೆ ಮೆಚ್ಚಿಗೆಯಲ್ಲ" ಎಂದು ಅಲ್ಲಮ ಕಟಕಿಯಾಡಿದಾಗ ಅಕ್ಕ ಮಹಾದೇವಿಯ ಉತ್ತರ -

*ಕಾಮನ ಮುದ್ರೆಯ ಕಂಡು ನಿಮಗೆ ನೋವಾದೀತೆಂದು*
*ಆ ಭಾವದಿಂದ ಮುಚ್ಚಿದೆ.*

ಕೇಳಿದಾಗ ಅಲ್ಲಮನಿಗೆ ಅಂತರಂಗದಲ್ಲಿ ಸಂತೋಷ - ಇದೀಗ ಆಕೆಯ ಸರಿಯಾದ ನಿಲುವು - ಆದರೂ ಅವಳ ಎತ್ತರ ಎಲ್ಲರಿಗೂ ತಿಳಿಯಲು ಮತ್ತೆ ಪರೀಕ್ಷಣ - ಅವಳು 'ನಾನುತನ' ವನ್ನು ಕಳೆದುಕೊಂಡಿದ್ದಾಳೆಂಬುದನ್ನು ಪ್ರಚುರಪಡಿಸಲು ಈ ತಂತ್ರ. ಅವಳ ನಾನುತನ ಪೂರ್ಣವಾಗಿ ಚನ್ನಮಲ್ಲಿಕಾರ್ಜುನನಲ್ಲಿ ಕರಗಿರುವುದು ಅವಳ ಮಾತಿನಿಂದ ಸ್ಪಷ್ಟವಾಗುತ್ತದೆ. ಆದರೂ,

*ಕಾಮದಿಂದ ಕಂಡ, ಕ್ರೋಧದಿದಂ ಅಸ್ಥಿ*
*ಲೋಭದಿಂದ ಸಕಲ ವಿಷಯಂಗಳು*
*ಮೋಹದಿಂದ ನೋಡಿಹನೆಂಬುದೆಲ್ಲವು ಕಾಮನ ಬಲೆಯೊಳಗು.*

ಆದ್ದರಿಂದ ಅವಳು ಕಾಮವನ್ನು ಗೆದ್ದಳೆಂದರೆ ನಂಬುವುದಾದರೂ ಹೇಗೆ, ಮಾಯೆಯನ್ನು ಗೆದ್ದೆನೆಂಬ, ಕಾಮವನ್ನು ಅಳಿಸಿಬಿಟ್ಟೆನೆಂಬ ಅಹಮಿಕೆಯ ಮಂಕುತನ ಕವಿದರೆ ಅದೂ ಮಾಯೆಯ ಆಟವೇ ಅಲ್ಲವೇ? ಆಗ ಅವಳು ಕೊಡುವ ಉತ್ತರ ಅಲ್ಲಮ ನಿರೀಕ್ಷಿಸಿದ್ದೇ - ಲಿಂಗ, ಅರುಹು, ಶಿವಾನುಭವಗಳಿಂದ ತನ್ನ ಮೈಮನ ಮತ್ತು ಜೀವಗಳನ್ನು ಪೂತಗೊಳಿಸಿಕೊಂಡ ಅಕ್ಕಮಹಾದೇವಿಯು ಕಾಮನ ಸುಟ್ಟರಿಹಿದ ಭಸ್ಮವಾಗಿದ್ದಾಳೆಂಬುದನ್ನು ಅಲ್ಲಮ ಎಲ್ಲರಿಗೂ





ಮನವರಿಕೆ ಮಾಡಿಕೊಡುತ್ತಾನೆ. ಕೊನೆಗೆ ತಾನೇ ಅವಳನ್ನು ಮೆಚ್ಚಿ;

*ಅಂಗ ಅಂಗನೆಯ ರೂಪಲ್ಲದೆ*
*ಮನ, ವಸ್ತು ಭಾವದಲ್ಲಿ ಬೆಚ್ಚಂತಿಪ್ಪುದು*
*ಬಂದ ಕದನದಲ್ಲಿ ಬಂದು ಹಿಂಗಿದೆಯಲ್ಲಾ, ಅಕ್ಕಾ?*
*ಗುಹೇಶ್ವರ ಲಿಂಗದಲ್ಲಿ ಉಭಯ ನಾಮವಳಿದೆ ಎನ್ನಕ್ಕ*

ಎಂದು ಅಕ್ಕಮಹಾದೇವಿಯನ್ನು ಅನುಭಾವಯೋಗದಲ್ಲಿ ತನ್ನ ಅಕ್ಕನೆಂದು ಸಾರುತ್ತಾನೆ ಅಲ್ಲಮ; ಮಾಯೆಯನ್ನು ಕಳಚಿಕೊಂಡಿದ್ದ ಅಲ್ಲಮನಿಗೆ ಮಾಯೆಯನ್ನು ಕಳಚಿದುದು ಗುರುತಾಗುವುದು ಸುಲಭಸಾಧ್ಯವಾಗಿದ್ದುದರಿಂದ, ಇಲ್ಲಿ ಪ್ರಮುಖವಾದ ವಿಷಯ- ಅನುಭಾವವೇ ಮೂರ್ತಿವೆತ್ತ ಅಲ್ಲಮ ವೈರಾಗ್ಯವೇ ಮೂರ್ತಿಗೊಂಡ ಅಕ್ಕಮಹಾದೇವಿಯ ಅನುಭಾವವನ್ನು ಎಲ್ಲರಿಗೂ ಪ್ರಕಟಗೊಳಿಸಿದುದು. ಬೆಳಕು ಸಣ್ಣದು, ದೊಡ್ಡದು ಎಂಬುದಿಲ್ಲ - ಎಲ್ಲವೂ ಬೆಳಕೇ ಎಂದು ತೋರುವ ಬೆರಗಿನ ಬೆಳಕು ಇದು. ಕೊನೆಗೆ ಅಕ್ಕಮಹಾದೇವಿ ಕದಳೀಬನಕ್ಕೆ ತೆರಳುವಾಗ ಅಲ್ಲಮ ಆಕೆಗೆ ಹೇಳುವ ಮಾತು - ಈ ಅನುಭಾವದ ಪಾರಮ್ಯ.

ನೀನಾನೆಂಬುಭಯಸಂಗವಳಿದು ತಾನುತಾನಾದ
ತ್ರಿಕೂಟವೆಂಬ ಮಹಾಗಿರಿಯ

ಏರಿ ನೋಡಿದರೆ ಎಲ್ಲವೂ ಬಟ್ಟಬಯಲು - ಆ ಶೂನ್ಯದಲ್ಲಿ ಅಕ್ಕಮಹಾದೇವಿ ಜ್ಯೋತಿಯನ್ನು ಕಾಣುವಳು - ಅಲ್ಲಿ ಐಕ್ಯವಾಗುತ್ತಾಳೆ. ಆದರೆ ನಿಜವಾಗಿ ಅವಳಿಗೆ ಈ ಸಿದ್ಧಿ ಅನುಭಾವ ಸಾಧಿಸಿದೆ ಎನ್ನುವುದು ನಿಚ್ಚಳವಾಗಿ ಅರಿಯುತ್ತದೆ.

*ತನುಗುಣನಾಸ್ತಿಯಾಗಿ ಲಿಂಗಸಂಗಿಯಾದಳು*
*ಮನಗುಣನಾಸ್ತಿಯಾಗಿ ಅರಿವುಸಂಗಿಯಾದಳು*
*ಭಾವಗುಣನಾಸ್ತಿಯಾಗಿ ಮಹಾಪ್ರಭೆ ತಾನಾದಳು*
*ತಾನಿದಿರೆಂಬೆರಡಳಿದು ನಮ್ಮ ಗುಹೇಶ್ವರ ಲಿಂಗದಲ್ಲಿ*
*ಸ್ವಯಲಿಂಗವಾದ ಮಹಾದೇವಿಯಕ್ಕಗಳ ನಿಲವಿಂಗೆ*
*ಶರಣೆನುತಿರ್ದೆನು*

ಎಂದು ಅಲ್ಲಮ ಘೋಷಿಸಿದ್ದು ಅನುಭಾವದ ಅಂತರಾಳದ ಆತ್ಮ

ಭಕ್ತಿಭಾಂಡಾರಿ ಬಸವಣ್ಣ ಬಿಜ್ಜಳನ ಭಂಡಾರಿಯೂ ಆಗಿದ್ದುದು ಆತನ ಕಾರ್ಯಕ್ಷಮತೆಗೆ ಪ್ರತೀಕವಾಗಿದ್ದುದು ಸರಿ. ಆದರೆ ಹೀಗೆ ರಾಜ್ಯದ ಭಂಡಾರಿಯಾಗಿದ್ದುದರಿಂದ ಆತನ ಉಳಿದ ಕಾರ್ಯ ಪರಿಮಿತಿಗೊಂಡಿದ್ದುದೂ ನಿಜ. ಮಹಾಮನೆಯ ಆಡಳಿತ, ರಾಜ್ಯದ ಖಜಾನೆಯ ವ್ಯವಹಾರಗಳ ಮೇಲ್ವಿಚಾರಣೆ, ನಿತ್ಯದಾಸೋಹದ ಎಲ್ಲ ಕಾಯಕಗಳನ್ನು ಕೈಲಾಸವೆಂದೇ ನಂಬಿ ನಡೆಸುತ್ತಿದ್ದ ಬಸವಣ್ಣ. ಆದರೆ ಲೌಕಿಕವ್ಯವಹಾರದ ಜಂಜಡ, ಸೆಳೆತಗಳಿಂದ ಕೇವಲ ಕೆಲವೇ ಕ್ಷಣಗಳಷ್ಟುಕಾಲ ಮಾತ್ರವೇ ಬಸವಣ್ಣ ಬಿಡುಗಡೆ ಹೊಂದುತ್ತಿದ್ದುದು. ಈ ಬಿಡುವಿನ ವೇಳೆಯಲ್ಲಿ ಬೇರೆಲ್ಲರ ಅನುಭಾವಗಳನ್ನು ಹಂಚಿಕೊಳ್ಳಲೆಂದೇ ಬಸವಣ್ಣ ಅನುಭವ ಮಂಟಪವನ್ನು ರೂಪಿಸಿದ್ದುದೂ ಸತ್ಯ. ಈ ಅನುಭವ ಮಂಟಪದ ಅಧ್ಯಕ್ಷಸ್ಥಾನವೇ ಶೂನ್ಯಸಿಂಹಾಸನ. ಈ ಶೂನ್ಯವೇ ಪರಿಪೂರ್ಣತೆಯ ಹೊರಬಿಂಬವಾಗಿದ್ದು ಆ ಸ್ಥಾನಕ್ಕೆ ತಕ್ಕವನಿಗಾಗಿ ಕಾಯುತ್ತಿದ್ದ ಕಾತರದಿಂದ ಬಸವಣ್ಣ. ಆಗಲೇ ಶೂನ್ಯತೆಯೇ ಮೈವೆತ್ತ ಪರಿಪೂರ್ಣ ಅನುಭಾವಿ ಅಲ್ಲಮ ಅಲ್ಲಿಗೆ ಆಗಮಿಸಿದುದು. ಅಲ್ಲಮ ಬಂದೊಡನೆ ಅನುಭವ ಮಂಟಪವೂ ಪೂರ್ಣವಾಯಿತು. ಉಳಿದಂತೆ ಬಂದವರೆಲ್ಲ ಮಹತ್ತರ ಬೆಳಕಿಗೆ ಬಂದು ಸೇರುವ ಕಿರುಹಣತೆಗಳಂತೆ ಅಲ್ಲಿ ಬೆರೆತರು. ಅಲ್ಲಮ ಬಂದು ಅನುಭವ ಮಂಟಪಕ್ಕೆ ಬೇರೆ ತಿರುವನ್ನೇ ಕೊಟ್ಟ - ಎಲ್ಲರೂ ತಮ್ಮ ತಮ್ಮ ಶಿವಾನುಭವವನ್ನು ಉಳಿದವರೊಂದಿಗೆ ಹಂಚಿಕೊಂಡು ಹೆಚ್ಚಿಸಿಕೊಳ್ಳುವಂತೆ ಮಾಡಿದ. ಸಂದೇಹಗಳನ್ನು ತೊಡೆದುಹಾಕಲು ಚರ್ಚೆಗಳನ್ನು ಪ್ರಾರಂಭಿಸಿ ಮಾರ್ಗದರ್ಶನ ಮಾಡಿದ. ಸಮಸ್ಯೆಗಳನ್ನು ಬಿಡಿಸಲು ಶರಣರು ತಮ್ಮ ತಮ್ಮ ವಿಚಾರ, ಶಿವಾನುಭವಗಳನ್ನು ಪ್ರಕಟಿಸುವಂತೆ ಉತ್ತೇಜಿಸಿ, ಮಥಿಸಿ, ಮಥಿಸಿ ಅನುಭಾವವನ್ನು ಕಡೆದು ತೆಗೆಯುತ್ತಿದ್ದುದು ಅಲ್ಲಮನ ಉದಾತ್ತ ನಿಲುವು. ಹೀಗಾಗಿ ಬಸವಣ್ಣನ ಅನುಭವಮಂಟಪಕ್ಕೆ ನಿಜವಾದ ನಿಲುವನ್ನು ನೀಡಿದುದು ಅಲ್ಲಮ, ಅಂತೆಯೇ ಅನುಭಾವವೇ ಈ ರೂಪದಲ್ಲಿ ಪರಿಪೂರ್ಣತೆಯನ್ನು ಪಡೆದು ಬಂದಿದೆಯೆಂಬುದನ್ನರಿತ ಬಸವಣ್ಣ ಶೂನ್ಯಸಿಂಹಾಸನಕ್ಕೆ ಈ ಬಟ್ಟಬಯಲ ಮೂರ್ತಿಯನ್ನೇ-ಶೂನ್ಯ ರೂಪಿಯನ್ನೇ ಅಧ್ಯಕ್ಷನನ್ನಾಗಿಸಿ ಕೂರಿಸಿದುದು. ಆಗ ಅಲ್ಲಮನಿಂದ ಅನುಭವಮಂಟಪ ಅನುಭಾವಮಂಟಪವಾಯಿತು. ಹಲಕಾಲ, ಕೆಲವು ರೀತಿಯಲ್ಲಿ ಎಲ್ಲರಿಗೂ ಈ ಲಿಂಗಾಂಗ ಸಾಮರಸ್ಯದ ತಿರುಳನ್ನು ನೀಡಿದ ಅಲ್ಲಮ - ಕೊನೆಯಲ್ಲಿ

**ಕಾಯವೆಂಬ ಕದಳಿಯ ಹೊಕ್ಕು**
**ಪ್ರಾಣವೆಂಬ ಗಹ್ವರದೊಳಗೆ**
**ಸಕಲೇಂದ್ರಿಯವೆಂಬ ಕೋಣೆ ಕೋಣೆಗಳಲ್ಲಿ**
**ತಿರುಗಾಡುತ್ತಾ ಬರಲಾಗಿ**
**ಮೇರುಮಂದಿರದ ತ್ರಿಕೋಣೆಯಲ್ಲಿ ಬೆಳಗಾಯಿತ್ತು**
**ಗುಹೇಶ್ವರ ಲಿಂಗವೆಂಬುದೊಂದು ರೂಪಾಯಿತ್ತು**

ಎಂಬರಿವಿನಿಂದ ಶ್ರೀಶೈಲದ ಕದಳಿವನಕ್ಕೆ ಪ್ರವೇಶಿಸಿದ ಅಲ್ಲಮ. ಅವಧಿಯಳಿದಿತ್ತು. ತಾನು ಕದಳಿಯಲ್ಲಿ ಹೊಕ್ಕು ನಿಜದಲ್ಲಿ ಒಡಗೂಡುವುದು ಪರಿಣಾಮ. ಇದನ್ನರಿತ ಅಲ್ಲಮ ಶ್ರೀಶೈಲದಲ್ಲಿ ಪ್ರವೇಶಿಸಿದಾಗ 'ಘನವ ಕಂಡು ಮನವು ಗ್ರಹಿಸಿತ್ತು - ಕಂಡು ಕಂಡು ಮನ ಮಹಾಘನವಾಯಿತ್ತು'. ಆಗ ಅಲ್ಲಮ ಗುಹೇಶ್ವರನಲ್ಲಿ ತದ್ಗತನಾದ - ಘನ ಘನದಲ್ಲಿ ಕೂಡಿತು - ಅಲ್ಲಮ ಶ್ರೀಶೈಲದಲ್ಲಿ ಶ್ರೀಶೈಲನಾದ. ಅಂತೆಯೇ ಅನುಭಾವವೇ ಅಲ್ಲಮ.

●

# ಪರಿಸರ ಶಿಕ್ಷಣ

- ಡಾ. ಹೆಚ್.ವಿ. ಶಿವಶಂಕರ್
ರೀಡರ್, ಎಂ.ಎಂ. ಟೀಚರ್ಸ್ ಕಾಲೇಜು, ದಾವಣಗೆರೆ

ಐನೂರು ಕೋಟಿ ವರ್ಷಗಳ ಹಿಂದೆ ಹುಟ್ಟಿದ ಭೂಮಿ ಒಂದು ಸುಂದರ ಗ್ರಹ. ೨೦ಲಕ್ಷ ವರ್ಷಗಳ ಹಿಂದೆ ಜನಿಸಿದ ಮಾನವ, ಪ್ರಾಣಿ ಮತ್ತು ಸಸ್ಯಗಳ ನೆಲವೀಡಿನ ಮೇಲೆ ಹಾಗೂ ಜೀವಾಶ್ರಯದ ಮೇಲೆ ಅಜ್ಞಾನದಿಂದ ಅತ್ಯಾಚಾರವೆಸಗುತ್ತಿದ್ದಾನೆ. ಜೀವಿಗಳ ಜೀವನದ ಪರಿಣಾಮ, ಅಭಿವೃದ್ಧಿ ಮತ್ತು ಜೀವನದ ಮೇಲೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಬೀರುವ ವಿಶಿಷ್ಟಪ್ರಭಾವದ ವಿದ್ಯಮಾನಗಳೇ ಪರಿಸರ. ನಮ್ಮ ಸುತ್ತಮುತ್ತಲಿನ ಜಗತ್ತು ಪರಿಸರ. ಇಂತಹ ಪರಿಸರದ ಮೇಲೆ ಜನಸಂಖ್ಯಾಸ್ಫೋಟವು ದುಷ್ಪರಿಣಾಮಗಳನ್ನು ಬೀರುತ್ತಿದೆ. ಅಭಿವೃದ್ಧಿಯ ಹೆಸರಿನಲ್ಲಿ ನೈಸರ್ಗಿಕ ಸಂಪನ್ಮೂಲಗಳ ಲೂಟಿ ನಡೆದಿದೆ. ನೈಸರ್ಗಿಕ ಪರಿಸರ ವಸ್ತುಪರಿಸರ ಮತ್ತು ಭಾವನೆ ಪರಿಸರಗಳೆಲ್ಲಾ ಮನುಷ್ಯನ ದುರಾಸೆ, ಮಾನವನ ನಾಶಕ್ಕೆ ಮಾತ್ರವಲ್ಲದೆ ಪರಿಸರದ ಮಾಲಿನ್ಯಕ್ಕೆ ಕಾರಣವಾಗಿದೆ. ಮನುಕುಲದ ಕಲ್ಯಾಣದ ದೃಷ್ಟಿಯಿಂದ ಪರಿಸರಕ್ಕೆ ಹೆಚ್ಚಿನ ಗಮನ ಕೊಡಬೇಕಾಗಿದೆ.

ಜಲ, ವಾಯು, ಶಬ್ದ, ಮಣ್ಣು ಮತ್ತು ಮನಸ್ಸಿನ ಮಾಲಿನ್ಯಗಳಿಂದ ಪ್ರಾರಂಭವಾದದ್ದು. ಇಂದು ಅರಣ್ಯನಾಶ, ಅಣುವಿಕಿರಣ ಹಾಗೂ ವನ್ಯಜೀವಿಗಳ ನಿರಂತರ ನಾಶಕ್ಕೆ ಕಾರಣವಾಗಿದೆ. ಸ್ಥಳೀಯವಾಗಿ ಮತ್ತು ವಿಶ್ವದಲ್ಲಿ ಇವುಗಳನ್ನು ಗಮನಿಸಿದಾಗ ಪರಿಸರ ನಾಶವಾಗುತ್ತಿರುವುದರಲ್ಲಿ ಎರಡು ಮಾತಿಲ್ಲ. ಪರಿಸರದ ನಾಶಕ್ಕೆ ಮನುಷ್ಯನ ದುರಾಸೆ, ಅಜ್ಞಾನ, ಭೋಗಜೀವನಕ್ಕಾಗಿ ವ್ಯವಸ್ಥಿತವಾಗಿ ಸಂಪನ್ಮೂಲಗಳು ಬಳಕೆಯಾಗದಿರುವುದರ ಜೊತೆಗೆ ಸೌಂದರ್ಯದ ಪ್ರಜ್ಞೆಯ ಕೊರತೆ ಸಹ ಎದ್ದು ಕಾಣುತ್ತಿದೆ. ಪರಿಸರದ ಸಂಪನ್ಮೂಲಗಳ ಶೋಷಣೆ ಪ್ರವೃತ್ತಿ ಮತ್ತು ದ್ವೇಷದ ಮನೋವೃತ್ತಿಗಳು ಸಹ ಸೇರಿವೆ. ಪ್ರಕೃತಿದತ್ತವಾದ ಸಂಪನ್ಮೂಲಗಳ ಅತಿಯಾದ ಬಳಕೆ, ದುರ್ಬಳಕೆ ಮತ್ತು ಬಳಕೆಯಲ್ಲಿ ಜಾಣ್ಮೆ ತಾಳ್ಮೆ ಹಾಗೂ ತಾಂತ್ರಿಕತೆ ಇಲ್ಲದಿರುವುದು ಕೈಗಾರಿಕೆಗಳ ಬೆಳವಣಿಗೆಗಳ ಮೇಲೆ ಕಡಿವಾಣ ಹಾಕದಿರುವುದು ಮತ್ತು ತ್ಯಾಜ್ಯವಸ್ತುಗಳ ವಿಸರ್ಜನೆಯಲ್ಲಿ ಸೂಕ್ತವ್ಯವಸ್ಥೆ ಇಲ್ಲದಿರುವುದು ಎಂದು ಮುಂತಾದ ಹಲವು ಕಾರ್ಯಗಳಿಂದ ಸಾರ್ವತ್ರಿಕವಾಗಿ ಪರಿಸರವನ್ನು ಹಾಳುಮಾಡುತ್ತಿದ್ದೇವೆ. ಮಾನವನಿಗೆ ಸ್ವಯಂ ನಿಯಂತ್ರಣ ಕಾನೂನು ಮತ್ತು ಪರಿಸರ ಶಿಕ್ಷಣದಿಂದ ಮಾತ್ರವಲ್ಲದೆ ನೈತಿಕಪ್ರಶ್ನೆ ಸಹ ಈಗ ಮೂಡಬೇಕಾಗಿದೆ.

ಆಮ್ಲದ ಮಳೆ, ಓಝೋನ್ ಪದರದಲ್ಲಿ ರಂಧ್ರ, ಮಣ್ಣಿನ ಸವೆತ, ಅಂತರ್‌ಜಲದ ಕೊರತೆ, ರಸಾಯನಿಕ ವಸ್ತು ಮತ್ತು ಗೊಬ್ಬರಗಳ ಅತಿಯಾದ ಬಳಕೆ ಮತ್ತು ವನ್ಯಜೀವಿಗಳ ಬೇಟೆ, ಬೃಹತ್ ನೀರಾವರಿ ಯೋಜನೆಗಳ ನಿರ್ಮಾಣದಂತಹ ಭೀಕರ ಸಮಸ್ಯೆ ಅಭಿವೃದ್ಧಿ ಮತ್ತು ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಮಧ್ಯದಲ್ಲಿ ನಡೆಯುತ್ತಿದೆ.

**ನಾಲ್ಕು ಅಂಶಗಳ ಪಾತ್ರ**

ಪರಿಸರದ ಸಂರಕ್ಷಣೆ ಎಲ್ಲರ ಹೊಣೆ ಮಾತ್ರವಲ್ಲದೆ ಕರ್ತವ್ಯವೂ ಹೌದು. (೧) ತಿರಸ್ಕರಿಸುವುದು (Refuse) (೨) ಅತ್ಯಲ್ಪ ಬಳಕೆ (Reduce) (೩) ಪುನರ್‌ಬಳಕೆ (Reuse) ಮತ್ತು (೪) ಮರು ಪರಿವರ್ತನೆ (Recycling) ಎಂಬ ನಾಲ್ಕು ಮುಖ್ಯ ಅಂಶಗಳನ್ನು ಪ್ರತಿಯೊಬ್ಬರೂ ಪಾಲಿಸುವುದರ ಮೂಲಕ ಪರಿಸರದ ರಕ್ಷಣೆಗೆ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಮುಂದಾಗಬೇಕಾಗಿದೆ. ಕಸದಿಂದ ರಸ ಎನ್ನುವುದನ್ನು ಮಾಡಿತೋರಿಸಬೇಕಾಗಿದೆ. ತನ್ನನ್ನು ಕಡಿಯಲು ಕೊಡಲಿ ತಂದವನಿಗೂ ನೆರಳು ನೀಡುವ ಮರವನ್ನು ನೆಡುವುದು ಅಗತ್ಯ.

**(೧) ತಿರಸ್ಕರಿಸುವುದು**

ವಿದ್ಯುಚ್ಛಕ್ತಿಯ ಬಳಕೆಯಲ್ಲಿ ಜಾಣ್ಮೆಬೇಕಾಗಿದೆ. ೪೮,೦೦೦ ಮಕ್ಕಳಿಗೆ ಶಾಲಾ ಸೌಲಭ್ಯ ಕಲ್ಪಿಸುವುದು ಎಲ್ಲಿಂದ? ಇವರೆಲ್ಲಾ ದೊಡ್ಡವರಾದ ಮೇಲೆ ಬಳಕೆಗೆ ಸೌಲಭ್ಯ ಕೊಡುವುದಾದರೂ ಹೇಗೆ? ಕಲ್ಯಾಣಮಂದಿರಗಳಲ್ಲಿ ಅಲಂಕಾರಕ್ಕೆ ಬಳಸುವ ವಿದ್ಯುಚ್ಛಕ್ತಿಯನ್ನು ನಾವು ಉಳಿಸುವುದು ಅವಶ್ಯಕ. ವಿದ್ಯುಚ್ಛಕ್ತಿಗಾಗಿ ಅರಣ್ಯನಾಶ ನಿರಂತರವಾಗಿ ನಡೆಯುತ್ತಿದೆ. ಈ ದಿಸೆಯಲ್ಲಿ ಪ್ರತಿ ನಿಮಿಷ ವಿಶ್ವದಲ್ಲಿ ೨೪ ಹೆಕ್ಟೇರ್ ಅರಣ್ಯ ನಾಶವಾಗುತ್ತಿದೆ. ಭಾರತದಲ್ಲಿ ನಿಮಿಷಕ್ಕೆ ೨ ಹೆಕ್ಟೇರ್ ಅರಣ್ಯ ನಾಶವಾಗುತ್ತಿದೆ.

ಅನಗತ್ಯವಾಗಿ ಸೇದುವ ಬೀಡಿ, ಸಿಗರೇಟ್‌ನಿಂದ ಸುತ್ತಮುತ್ತಲಿನ ಜನರನ್ನು ಎರಡನೇ ಧೂಮಪಾನಿಗಳನ್ನಾಗಿ ಮಾಡುತ್ತಿದ್ದೇವೆ. ಹಸಿಸೌದೆಯಿಂದ ಅಡಿಗೆ ಮಾಡುವ ಗ್ರಾಮೀಣ ಮಹಿಳೆಯೊಬ್ಬಳು ಹೊಗೆಗೂಡಿನ ಕೊರತೆಯಿಂದ ಉಂಟಾಗುವ ಕೇಡು; ಗಂಡಸು ದಿನಕ್ಕೆ ೨೦ ಪ್ಯಾಕ್ ಸಿಗರೇಟು ಸೇದುವುದರಿಂದ ಆಗುವ ಅನಾಹುತಕ್ಕೆ ಸಮವೆಂದು ಹೇಳಲಾಗಿದೆ. ಈ ದಿಸೆಯಲ್ಲಿ ಪರಿಸರದ ನಾಶಕ್ಕೆ ಕಾರಣವಾಗುವ ಧೂಮಪಾನವನ್ನು ನಾವು ಸ್ವತಃ ಬಿಡುವುದಲ್ಲದೆ ಉಳಿದವರನ್ನು ಬಿಡಿಸುವುದು ಅಗತ್ಯ. ಆಸ್ಪತ್ರೆ, ಕಛೇರಿ ಮೊದಲಾದ ಕಡೆ ಸರ್ಕಾರಿ ಕಛೇರಿಗಳಲ್ಲಿ ಧೂಮಪಾನ





ಮಾಡುವುದನ್ನು ನಿಯಂತ್ರಿಸುವಲ್ಲಿ ನಾವುಗಳೆಲ್ಲಾ ಮುಂದಾಗಬೇಕು.

ಅಂಗಡಿಯವರು ನಾವು ತೆಗೆದುಕೊಳ್ಳುವ ಸಾಮಾನುಗಳನ್ನು ಪ್ಲಾಸ್ಟಿಕ್ ಚೀಲಗಳಲ್ಲಿ ಪ್ಯಾಕ್ ಮಾಡಿಕೊಡುವುದನ್ನು ತಿರಸ್ಕರಿಸಬೇಕು. ಇದರ ಬದಲು ಸಾಮಾನು ತರಲು ಹೋಗುವ ನಾವು ಸ್ವತಃ ಕೈಚೀಲ ತೆಗೆದುಕೊಂಡು ಹೋಗುವುದು ಸೂಕ್ತ. ೧ ಟನ್ ಕಾಗದದ ತಯಾರಿಕೆಗೆ ೨೫೦ ಟನ್ ನೀರು ಮಲಿನಗೊಳ್ಳುವುದನ್ನು ಮರೆಯದೆ ನೆನಪು ಇಟ್ಟುಕೊಳ್ಳಬೇಕು. ಇದರಿಂದ ಅನಗತ್ಯವಾಗಿ ಮಾಡುವ ಪತ್ರ ವ್ಯವಹಾರ, ಶುಭಾಶಯ ಪತ್ರಗಳ ವಿನಿಮಯದ ಮೇಲೆ ತಡೆ ಅಗತ್ಯ. ಹಬ್ಬ-ಹರಿದಿನಗಳಲ್ಲಿ ಬಳಸುವ ಮಾವಿನ ಎಲೆಯಿಂದ ಎಷ್ಟು ಪರಿಸರ ನಾಶವಾಗುತ್ತದೆಯೆಂದು ಯೋಚಿಸಿ. ದೀಪಾವಳಿಯಲ್ಲಿ ಹಾರಿಸುವ ಪಟಾಕಿ ಎಷ್ಟು ಶಬ್ದಮಾಲಿನ್ಯಕ್ಕೆ ಕಾರಣವಾಗುತ್ತದೆ. ವಾಹನಗಳಲ್ಲಿ ಹಾಕಿಕೊಳ್ಳುವ ಹಾರನ್ ಜನರಿಗೆ ಎಚ್ಚರಿಕೆ ನೀಡುವುದಕ್ಕೆ ಮಾತ್ರವೇ ವಿನಃ ಜನರ ಮಾನಸಿಕ ನೆಮ್ಮದಿಯನ್ನು ಹಾಳುಮಾಡಲು ಆಗಬಾರದು.

ಸ್ನೇಹಿತರ ಮನೆಗೆ ಹೋದಾಗ ಇಲ್ಲವೆ ನಮ್ಮ ಮನೆಗೆ ಒಬ್ಬರು ಸ್ನೇಹಿತರು, ನೆಂಟರು ಬಂದಾಗ ಅನಗತ್ಯವಾಗಿ ಒತ್ತಾಯ ಮಾಡಿ ಟೀ, ಕಾಫಿ ಕುಡಿಯುವಂತೆ ಮಾಡುವುದರಿಂದ ಆರೋಗ್ಯದ ದೃಷ್ಟಿಯಿಂದ ಅಪಾಯಕಾರಿ. ಆ ಕಾಫಿ, ಟೀ ಮಾಡಲು ಬಳಸುವ ಕಾಫಿ, ಟೀ ಪುಡಿ, ಹಾಲು ಸಕ್ಕರೆಯ ಜೊತೆಗೆ ಅದನ್ನು ಮಾಡಲು ಬಳಸುವ ವಿದ್ಯುತ್ತು, ಸೀಮೆಎಣ್ಣೆ ಸಹ ವ್ಯರ್ಥ. ಅದನ್ನು ಮಾಡಲು ಬಳಸಲು ಪಾತ್ರೆ ಮತ್ತು ಕಾಫಿ, ಟೀ ಲೋಟಗಳನ್ನು ತೊಳೆಯಲು ಉಪಯೋಗಿಸುವ ನೀರೂ ಸಹ ಮಲಿನಗೊಳ್ಳದೆ ಉಳಿಯುವುದಿಲ್ಲ. ಜನಸಂಖ್ಯೆಯು ಸ್ಫೋಟದ ಹಿನ್ನೆಲೆಯಲ್ಲಿ ೨ನೇ ಮಗು ಬೇಡವೆನ್ನುವುದು ಸಹ ಅವಶ್ಯಕ. ಈಗ ಹುಟ್ಟುವ ಮಕ್ಕಳಿಗೆ ಹೋಲಿಸಿದಾಗ ದಿನಕ್ಕೆ ೧೩೩೦ ತರಗತಿಗಳು ೨೭೫ ಶಾಲೆಗಳು ಬೇಕಾಗುವುದು. ವರ್ಷಕ್ಕೆ ೯೦,೪೦೦ ಶಾಲೆಗಳ ಕೊರತೆಯುಂಟಾಗುತ್ತಿದೆ. ಎಂದರೆ ೨ನೇ ಮಗುವನ್ನು ತಡೆಯುವ ಅವಶ್ಯಕತೆ ನಮ್ಮ ಸುತ್ತಮುತ್ತಲಿನ ಜನರಿಂದ ಆಗಲೇಬೇಕಾಗಿದೆ.

ಸಂಜೆಯ ವೇಳೆಯಲ್ಲಿ ಅನಗತ್ಯವಾಗಿ ತಿನ್ನುವ ತಿಂಡಿ, ತಟ್ಟೆಯಲ್ಲಿ ತಿನ್ನದೇ ಉಳಿಸುವ ಆಹಾರ ವ್ಯರ್ಥವಾಗಬಾರದು. ಹಸಿವಿಲ್ಲದಿದ್ದ ದಿನ ಮನೆಯಲ್ಲಿ ಅಥವಾ ಹಾಸ್ಟಲ್‌ನಲ್ಲಿ ತಮಗಾಗಿ ಊಟ ತಯಾರು ಮಾಡದಂತೆ ನೋಡಿಕೊಂಡರೆ ಅಷ್ಟು ಆಹಾರ ಬೆಳೆಯಲು ಕಾಡು ಕಡಿಯುವುದು ಉಳಿಯುವುದು. ಅಗತ್ಯಕ್ಕಿಂತ ಅತಿಯಾದ ಬಟ್ಟೆಗಳು, ಹವಾ ನಿಯಂತ್ರಣ ಸಾಧನಗಳನ್ನು ದೂರವಿಡುವುದನ್ನು, ವಾರಕ್ಕೆ ಒಂದು ದಿನದಲ್ಲಿ ಒಂದು ಊಟವನ್ನು ಬಿಡುವುದು ಅಗತ್ಯ. ಸುಗಂಧದ್ರವ್ಯಗಳ ಬಳಕೆ, ಅತಿಯಾಗಿ ರಸಾಯನಿಕ ಗೊಬ್ಬರದ ಬಳಕೆಯನ್ನು ದೂರ ಮಾಡುವುದು ಇತ್ಯಾದಿಗಳನ್ನು ನಾವು ರೂಢಿ ಮಾಡಿಕೊಂಡು ಉಳಿದವರ ಮೇಲೆ ಪ್ರಭಾವ ಬೀರಬೇಕಾಗಿದೆ.

**ಮಿತವ್ಯಯ**

ಅತಿಯಾದ ಬಿಸಿನೀರಿನಲ್ಲಿ ಸ್ನಾನ ಮಾಡುವ ಬದಲು ತಣ್ಣನೆಯ ನೀರಿನಲ್ಲಿ, ಇಲ್ಲವೆ ತಣ್ಣೀರಿನಲ್ಲಿ ಸ್ನಾನ ಮಾಡುವುದರಿಂದ ವಿದ್ಯುಚ್ಛಕ್ತಿಯ ಉಳಿತಾಯವಾಗುವುದು. ಅತಿಯಾಗಿ ನೀರನ್ನು ಸ್ನಾನಕ್ಕೆ ಬಳಸುವುದೂ ಸಹ ಸಲ್ಲದು. ಅಷ್ಟರ ಮಟ್ಟಿಗೆ ಪರಿಸರ ಸಂರಕ್ಷಣೆ ನಡೆಯುವುದು.

ಸಣ್ಣಪುಟ್ಟ ಕಾರ್ಯಗಳಿಗೆ ವಾಹನಗಳ ಬಳಕೆ ಕಡಿಮೆ ಮಾಡಿದರೆ ಇಂಧನ ಉಳಿತಾಯವಾಗುವುದು. ಶವಸಂಸ್ಕಾರ ಮಾಡುವಾಗ ಸುಡುವ ಮೂಲಕ ಪರಿಸರ ಮಾಲಿನ್ಯ ಮಾಡುವುದರ ಬದಲು ನೆಲದಲ್ಲಿ ಹೂಳುವ ಪದ್ಧತಿನ್ನು ಜಾರಿಗೆ ತರಬೇಕಾಗಿದೆ. ಅತಿಯಾಗಿ ಬೇಯಿಸಿದ ತರಕಾರಿಯಿಂದ ಜೀವಸತ್ವ ಹಾಳಾಗುವುದಲ್ಲದೆ ಇಂಧನ ಸಹ ವ್ಯಯವಾಗುವುದು ಮತ್ತು ವಾಯುಮಾಲಿನ್ಯ ಉಂಟಾಗುವುದು. ದೊಡ್ಡಸ್ತಿಕೆಗೆ ಹಲವು ದಿನಪತ್ರಿಕೆಯನ್ನು ತರಿಸಿಕೊಂಡರೆ ಕಾಗದದ ತಯಾರಿಕೆಗಾಗಿ ವ್ಯಯವಾಗುವ ಮರ, ನೀರು ಉಳಿಯುವುದು. ಕಡಿಮೆ ದುಡ್ಡಿಗೆ ಹೆಚ್ಚು ಪುಟಗಳು ದೊರೆಯುತ್ತದೆಂದು ಇಂಗ್ಲೀಷ್ ದಿನಪತ್ರಿಕೆಯ ವ್ಯಾಮೋಹ ಸಹ ಸಲ್ಲದು. ಅನಗತ್ಯವಾಗಿ ಬಸ್ಸು / ರೈಲಿನಲ್ಲಿ ಓಡಾಡುವುದು ಕಡಿಮೆಯಾದರೆ ಪ್ರಯಾಣದ ಸಾಂದ್ರತೆ ಕಡಿಮೆಯಾಗುವುದು. ಪ್ರಯಾಣಿಸುವವರಾದರೂ ಸುಖವಾಗಿ ಹೋಗಿ ಬರಬಹುದು. ಇಂದಿನ ದಿನಗಳಲ್ಲಿ ಬಸ್‌ನ ಟಾಪ್ ಮೇಲೆಲ್ಲಾ ಕುಳಿತು ಜನ ಪ್ರಯಾಣಿಸುವುದು ಆರೋಗ್ಯಕರವಾದ ಬೆಳವಣಿಗೆಯಾಗುವುದಿಲ್ಲ. ಮನೆ ಮಂದಿ ಎಲ್ಲ ಒಟ್ಟಿಗೆ ಕುಳಿತು ಊಟ ಮಾಡಿದರೆ ಆಹಾರವನ್ನು ಮತ್ತೆ ಮತ್ತೆ ಬಿಸಿ ಮಾಡುವುದನ್ನು ತಡೆಯಬಹುದು.

ರೈತರು ಗದ್ದೆಯಲ್ಲಿರುವ ಬದುಗಳನ್ನು ಸರಿಯಾಗಿ ನೋಡಿಕೊಂಡರೆ ನೀರು ಹರಿದು ಹೋಗುವುದನ್ನು ಮಿತವ್ಯಯ ಮಾಡಬಹುದು. ಬದುಗಳ ಮೇಲೆ ಹುಲ್ಲು ಬೆಳೆಸುವುದು; ಈ ದಿಸೆಯಲ್ಲಿ ಸಹಾಯಕ. ಸಹಜವಾದ ಬೆಳಕು ಇದ್ದಾಗ ಮನೆಯಲ್ಲಿ ಹಗಲಿನ ವೇಳೆಯಲ್ಲಿ ಮತ್ತು ಸಂಜೆಗೆ ಮೊದಲೇ ವಿದ್ಯುಚ್ಛಕ್ತಿ ಬಳಕೆ ಬೇಡ. ಎಷ್ಟೋ ನಗರಗಳಲ್ಲಿ ಬೆಳಕು ಹರಿದ ಮೇಲೂ ರಸ್ತೆದೀಪಗಳು ಉರಿಯುತ್ತಿರುತ್ತವೆ. ಇದು ಎಂದಿಗೂ ಕ್ಷಮಿಸುವ ಕಾರ್ಯವಾಗವಾಗುದಿಲ್ಲ. ಕೇಬಿಯವರು ಮರ ಕಡಿಯುವುದನ್ನು ವಿರೋಧಿಸಿ ನೆಲದ ಒಳಗೆ ಕೇಬಲ್ ಮೂಲಕ ವಿದ್ಯುಚ್ಛಕ್ತಿ ಸಾಗಿಸುವಂತೆ ಸರ್ಕಾರದ ಮೇಲೆ ಒತ್ತಡ ತರುವುದು ಒಳ್ಳೆಯದು. ಅತಿಯಾದ ಔಷಧಿಬಳಕೆ ಸಹ ಸಲ್ಲದು. ಪದೇ ಪದೇ ಚುನಾವಣೆ ಬರದಂತೆ ಸುಭದ್ರ ಸರ್ಕಾರದ ರಚನೆಯಾಗುವಂತೆ ನಾಯಕರುಗಳನ್ನು ನಾವು ಆಯ್ಕೆ ಮಾಡದಿದ್ದರೆ ಪ್ರತಿಯೊಂದು

ಚುನಾವಣೆಯಿಂದ ಆಗುವ ಪರಿಸರ ಮಾಲಿನ್ಯ ಎಷ್ಟು? ರೈತನೊಬ್ಬ ಉತ್ತಮವಾದ ಉಗ್ರಾಣ ಹೊಂದಿದರೆ ಇಲಿಗಳಿಂದ ಹಾಳಾಗುವ ಆಹಾರದ ಧಾನ್ಯಗಳು ಉಳಿಯುವುದು. ಅಷ್ಟು ಆಹಾರದ ಧಾನ್ಯಗಳನ್ನು ಉಳಿಸಿದರೆ ಅಷ್ಟನ್ನು ಬೆಳೆಯಲು ಕಡಿಯುವ ಕಾಡು ಉಳಿತಾಯವಾಗುವುದು. ಬಟ್ಟೆಯನ್ನು ಹೆಚ್ಚು ಕೊಳೆಯಾಗದಂತೆ ಎಚ್ಚರವಹಿಸಿದರೆ ಅದನ್ನು ತೊಳೆಯಲು ಬಳಸುವ ಸೋಪು ಮತ್ತು ನೀರು ಮಾತ್ರವಲ್ಲದೆ, ವೇಳೆ ಸಹ ಉಳಿತಾಯವಾಗುವುದು. ಅತಿಯಾದ ಹವಾ ನಿಯಂತ್ರಿಯ ಯಂತ್ರ, ರೆಫ್ರಿಜರೇಟರ್ ಬಳಕೆ ಮತ್ತು ಬಣ್ಣದ ಕೈಗಾರಿಕೆ, ಕಂಪ್ಯೂಟರ್‌ಗಳ ಸ್ವಚ್ಛತೆಯಿಂದ ಪರಿಸರಕ್ಕೆ ಕ್ಲೋರೋಫ್ಲೋರೋ ಕಾರ್ಬನ್ ಸೇರುತ್ತಿರುವುದರಿಂದ ಓಝೋನ್ ಪರಿಸರದಲ್ಲಿ ರಂಧ್ರ ಉಂಟಾಗುತ್ತವೆ. ಆದ್ದರಿಂದ ಇವುಗಳ ಬಳಕೆ ಕಡಿಮೆಯಾಗಬೇಕು.

**ಪುನರ್ ಬಳಕೆ**

ಭತ್ತದ, ಕಬ್ಬಿನ ಕೂಳೆಯಿಂದ ಮತ್ತೆ ಬೆಳೆ ಬೆಳೆಯುವುದು ಹೊಸ ಪದ್ಧತಿಯೇನೂ ಅಲ್ಲ. ಆದರೆ ಅದನ್ನು ಜಾರಿಗೆ ತರುತ್ತಿಲ್ಲ. ಹಾಗೆ ಮಾಡಿದರೆ ಎಷ್ಟು ಶ್ರಮ ಬೀಜ ಇತ್ಯಾದಿಗಳ ಉಳಿತಾಯವಾಗುವುದು. ಭತ್ತದ ಗದ್ದೆಯಲ್ಲಿ ಮೀನು ಬೆಳೆಯುವ ವಿಧಾನವನ್ನು ಸಹ ಜಾರಿಗೆ ತಂದು ಕೊಂಡರೆ ಲಾಭವಾಗುವುದು. ಹಾಳುಬಿದ್ದ ಜಮೀನುಗಳ ಬಳಕೆಯನ್ನು ಮಾಡಿಕೊಳ್ಳಲು ಮುಂದಾಗಬೇಕು. ರಸ್ತೆಯನ್ನು ನೆಟ್ಟಗೆ ಮಾಡಲು ಕಾಡು ಕಡಿಯುವುದರಿಂದ ಪರಿಸರ ನಾಶವಾಗುವುದಿಲ್ಲವೇ? ವಾಹನದ ರಬ್ಬರ್ ಟೈರ್‌ಗಳನ್ನು ಪುನಃ ಬಳಕೆಗೆ ಯೋಗ್ಯ ಮಾಡಿಕೊಳ್ಳುವ ತಂತ್ರ ಬಳಸುವುದು ನಡೆಯಬೇಕು. ಹೊಸದನ್ನು ತೆಗೆದುಕೊಳ್ಳುವ ಹಣಕ್ಕೆ ಸಮನಾಗಿಯೇ ಇದು ಆಗಬಾರದು. ನಮ್ಮ ಕೂದಲನ್ನು ಕತ್ತರಿಸಿ ಹಾಕಿ ನಂತರ ಅದನ್ನು ವಿಗ್ ಮಾಡಲು ಬಳಸುವುದರಿಂದ ರಸಾಯನಿಕ ವಸ್ತುಗಳಿಂದ ನೂಲು ಮಾಡುವುದು ತಪ್ಪುತ್ತದೆ. ಕಪ್ಪೆಚಿಪ್ಪಿನಿಂದ ಸುಣ್ಣವನ್ನು ಮಾಡಿದರೆ ಸುಣ್ಣದ ಕಲ್ಲಿನ ತಯಾರಿಕೆಯಿಂದ ಆಗುವ ಪರಿಸರ ಮಾಲಿನ್ಯವನ್ನು ತಡೆಯಬಹುದು. ಟ್ರಾಕ್ಟರ್‌ನಿಂದ ತೆಗೆದ ಇಂಜಿನ ಆಯಿಲ್ ಅನ್ನು ಎತ್ತಿನ ಗಾಡಿಗಳಿಗೆ ಕೀಲುಎಣ್ಣೆಯನ್ನಾಗಿ ಬಳಸುವುದನ್ನು ರೂಢಿ ಮಾಡಿಕೊಂಡಿರುವುದನ್ನು ಇಲ್ಲಿ ಸ್ಮರಿಸಬಹುದು.

ಕಬ್ಬಿನ ಸಿಪ್ಪೆಯಿಂದ ಕಾಗದ ತಯಾರಿಸಬಹುದು. ಸಗಣಿಯನ್ನು ಗೊಬ್ಬರವಾಗಿ ಉಪಯೋಗಿಸುವ ಮೊದಲು ಗೋಬರ್‌ಗ್ಯಾಸ್ ತಯಾರಿಕೆಗೆ ಬಳಕೆ ಮಾಡಿಕೊಳ್ಳಬೇಕಾಗಿದೆ. ಪಾತ್ರೆ ತೊಳೆದ ಮತ್ತು ಸ್ನಾನದ ನೀರು ಚರಂಡಿ ಸೇರುವಂತೆ ಮಾಡುವ ಬದಲು ಗಿಡಗಳಿಗೆ ನೀರಾಗಿ ಬಳಕೆಯಾಗುವಂತೆ ನೋಡಿಕೊಳ್ಳಬೇಕು. ಕೈಪಂಪುಗಳ ಸುತ್ತ ನೀರು ಹರಿದು ಹೋಗದೆ ಉಳಿದು ಒಂದು ಗುಂಡಿಯಾಗಿ ಉಳಿದಿರುವುದು ನಾಗರೀಕತೆಯ ಲಕ್ಷಣವಲ್ಲ. ಬಳಕೆಯಾದ ಟೀ, ಕಾಫಿಪುಡಿಯು ಕರಿಬೇವಿನ ಗಿಡಗಳಿಗೆ ಉತ್ತಮ ಗೊಬ್ಬರವೆನ್ನುವುದನ್ನು ಗಮನಿಸಬೇಕಾಗಿದೆ. ಕಟ್ಟಿಗೆಯನ್ನು ಬಳಸುವಾಗ ಕೆಂಡವು ಬೂದಿಯಾಗದಂತೆ ನೋಡಿಕೊಂಡು ಇದ್ದಿಲನ್ನಾಗಿ ಮಾರ್ಪಡಿಸಿದರೆ ಮತ್ತೆ ಬಳಕೆಗೆ ಉಪಯೋಗವಾಗುವುದು.

ವರ್ಷದ ಕೊನೆಯಲ್ಲಿ ಬಳಕೆಯಾದ ಎಕ್ಸೈಸ್ ಪುಸ್ತಕಗಳಲ್ಲಿ ಉಳಿದ ಬಿಳಿಯ ಹಾಳೆಯನ್ನು ಬೇರ್ಪಡಿಸಿಕೊಂಡು ಪುಸ್ತಕಗಳನ್ನಾಗಿ ಮಾಡಿಕೊಂಡು ಬಳಸಬಹುದಾಗಿದೆ ಎನ್ನುವುದನ್ನು ಮಕ್ಕಳಿಗೆ ತಿಳಿಸಿಕೊಡಬೇಕಾಗಿದೆ. ವರ್ಷದ ಎಲ್ಲ ದಿನಗಳಲ್ಲಿ ಪಠ್ಯಪುಸ್ತಕಗಳನ್ನು ಹಾಳಾಗದಂತೆ ಬಳಕೆಮಾಡಿಕೊಂಡು ಮುಂದಿನ ವರ್ಷ ಪಠ್ಯಪುಸ್ತಕಗಳನ್ನು ಮುದ್ರಿಸುವುದು ತಪ್ಪುತ್ತದೆ. ಕಡಿಮೆಬೆಲೆಗೆ ಪಠ್ಯಪುಸ್ತಕಗಳನ್ನು ಸಹ ತೆಗೆದುಕೊಳ್ಳಬಹುದಾಗಿದೆ. ಹಳೆಯ ಬಟ್ಟೆಯಿಂದ ಕಾಲು ಒರೆಸುವ ವಸ್ತು ತಯಾರಿಕೆ ಸಹ ಅವಶ್ಯಕ. ಭತ್ತದ ಹೊಟ್ಟನ್ನು ಇಟ್ಟಿಗೆ ಸುಡಲು ಬಳಸುವುದು ಇಲ್ಲವೆ ಅದರಿಂದ ಎಣ್ಣೆ ತೆಗೆಯುವುದು ಮತ್ತು ಕಡಲೆಕಾಯಿಯ ಬೀಜದಿಂದ ಎಣ್ಣೆ ತೆಗೆದದ್ದನ್ನು ದನಗಳಿಗೆ ಮೇವಾಗಿ ಬಳಸುವುದು ನಡೆದಿದೆ ಯಾದರೂ ಅದರಿಂದ ಪೂರ್ಣಪ್ರಮಾಣದಲ್ಲಿ ಎಣ್ಣೆ ತೆಗೆಯಲು ಇನ್ನೂ ಆಗುತ್ತಿಲ್ಲವೆನ್ನುವುದೇ ವ್ಯಥೆ. ಕಲ್ಲಿದ್ದಲಿನ ಪುಡಿಯನ್ನು ಇಟ್ಟಿಗೆ ತಯಾರಿಕೆಯಲ್ಲಿ ಬಳಸುವುದು ನಡೆಯಬೇಕಾಗಿದೆ.

**ಮರು ಪರಿಪರಿವರ್ತನೆ**

ಕೈಗಾರಿಕೆಗಳಿಂದ ಮತ್ತು ಹೊಲದಲ್ಲಿ ಸುಡುವ ಕಬ್ಬಿನ ಸಿಪ್ಪೆಯಿಂದ ಹಾಗೂ ವಾಹನಗಳಿಂದ ಆಗುವ ವಾಯು ಮಾಲಿನ್ಯವನ್ನು ಪುನರ್‌ವ್ಯವಸ್ಥೆ ಮಾಡುವಲ್ಲಿ ಸಹಾಯಕವಾಗುವ ಕಾಡು ಮತ್ತು ಹಸಿರು ದೇಶದ ಉಸಿರು. ಇದು ಇಂಗಾಲದ ಡೈಆಕ್ಸೈಡ್ ಅನ್ನು ಪಡೆದು ಆಮ್ಲಜನಕ ಹೊರಬಿಡುವುದು. ಇದಕ್ಕೆ ಸಹಾಯಕವಾಗುವಂತೆ ಕಾಡನ್ನು ಬೆಳೆಸಬೇಕಾಗಿದೆ. ಭಾರತದಲ್ಲಿ ೨೩% ರಷ್ಟಿರುವ ಕಾಡು ಶೇ. ೩೩ರಷ್ಟು ಆಗಬೇಕಾಗಿದೆ. ವಿಶ್ವದ ಕಾಡಿನಲ್ಲಿ ಭಾರತದ ಅರಣ್ಯ ಪ್ರಮಾಣ ಶೇ. ೫ರಷ್ಟು. ಕರ್ನಾಟಕದ ಅರಣ್ಯ ಶೇ. ೨೦.೨ರಷ್ಟಿದೆ. ಈ ದಿಸೆಯಲ್ಲಿ ಮನೆಗೊಂದು ಮರ ನೆಡಬೇಕಾಗಿದೆ. ಪ್ರತಿವರ್ಷ ಶೇ. ೧ರಷ್ಟು ಭೂಮಿಯ ಮೇಲಿನ ಭಾಗ ನಾಶವಾಗುತ್ತಿದೆ.

ಕೈಗಾರಿಕೆಗಳು ಹೊರಬಿಡುವ ನೀರು ನದಿ ಸೇರದೆ ವ್ಯವಸಾಯಕ್ಕೆ ಉಪಯೋಗವಾಗುವಂತೆ ಮರು ಪರಿವರ್ತನೆಯಾಗಬೇಕು. ಚರಂಡಿಯ ನೀರು ಸಹ ಪುನಃ ಶುದ್ಧಿಗೊಂಡು ವ್ಯವಸಾಯಕ್ಕೆ ಯೋಗ್ಯವಾಗಬೇಕು. ಇಲ್ಲದಿದ್ದರೆ ನೀರಿನ ಕೊರತೆ ಒಂದು ಕಡೆಯಾದರೆ ಮಲಿನಗೊಂಡ ನೀರು ನದಿಯ ಜೀವಿಗಳನ್ನು ಸಹ ಹಾಳುಮಾಡುತ್ತವೆ. ಮರದ ಎಲೆಗಳಿಂದ ಹಸಿರುಗೊಬ್ಬರದ ತಯಾರಿಕೆ ನಡೆಯಬೇಕಾಗಿದೆ. ಇದು ರಸಾಯನಿಕ ವಸ್ತುಗಳ





ಬಳಕೆಯನ್ನು ಸಹ ಕಡಿಮೆ ಮಾಡುವುದು. ಹಳೆಯ ಕಬ್ಬಿಣದ ತಯಾರಿಕೆ ನಡೆಯುತ್ತಿದೆ. ರೀರೋಲಿಂಗ್ ಕಬ್ಬಿಣದ ತಯಾರಿಕೆಯ ತಂತ್ರಜ್ಞಾನ ಸಹ ಉತ್ತಮಗೊಳ್ಳಬೇಕಾಗಿದೆ. ಬಳಕೆಯಾದ ಮತ್ತು ಹಾಳಾದ ಗಾಜು ಮತ್ತು ಪ್ಲಾಸ್ಟಿಕ್‌ಗಳನ್ನು ಮರುಪರಿವರ್ತನೆಗೆ ಒಳಪಡಿಸಬೇಕಾಗಿದೆ. ವಾರ್ತಾಪತ್ರಿಕೆಗಳನ್ನು ಸಹ ಈ ದಿಸೆಯಲ್ಲಿ ಬಳಸಬಹುದಾಗಿದೆ. ಆದ್ದರಿಂದ ಅವುಗಳನ್ನು ಸುಡುವುದು ಸಲ್ಲದು. ಹೀಗೆ ಪರಿಸರದ ರಕ್ಷಣೆಯಲ್ಲಿ ಹಲವನ್ನು ಅನಗತ್ಯವಾಗಿ ಬಳಕೆ ಮಾಡದೆ ತಿರಸ್ಕರಿಸುವುದು, ಮಿತವಾಗಿ ಬಳಸುವುದು ಪರಿಸರದ ರಕ್ಷಣೆಯಲ್ಲಿ ಸಹಾಯಕವಾಗುವುದು. ಪ್ರತಿಯೊಂದು ಬಾರಿಯೂ ಪ್ರತಿಯೊಬ್ಬರೂ ಮರುಪರಿವರ್ತನೆ ಮಾಡಿಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ಮರುಪರಿವರ್ತನೆಗೆ ಯೋಗ್ಯವಾಗುವ ರೀತಿಯಲ್ಲಿ ಬಳಸಿಕೊಂಡು ಬಿಡುವುದು ಒಳ್ಳೆಯದು.

೧ ಟನ್ ಕಾಗದದ ತಯಾರಿಕೆಯಲ್ಲಿ ೨೭೭ ಮರಗಳು ಹಾಳಾಗುವುದು ಸಲ್ಲದು. ಗೃಹಬಳಕೆಯಿಂದ ಶೇ. ೯೦ರಷ್ಟು ನೀರು ಮಲಿನಗೊಳ್ಳುತ್ತದೆ. ಪ್ರತಿವರ್ಷ ೫ ರಷ್ಟು ಗಣಿ ಉದ್ಯಮಗಳು ವಿಸ್ತಾರಗೊಳ್ಳುತ್ತಿವೆ. ೩೦ ರಿಂದ ೮೦ರಷ್ಟು ನೀರಾವರಿ ಭೂಮಿ ಲವಣಾಂಶಗಳ ಹೆಚ್ಚಳದಿಂದ ವ್ಯವಸಾಯಕ್ಕೆ ಪೂರ್ಣ ಪ್ರಮಾಣದಲ್ಲಿ ಉಪಯುಕ್ತವಾಗುತ್ತಿಲ್ಲ. ಭಾರತ ಎಂ.ಪಿ.ಕೆ.ಯಂತಹ ರಸಾಯನಿಕ ಗೊಬ್ಬರದ ಉತ್ಪಾದನೆಯಲ್ಲಿ ನಾಲ್ಕನೆಯ ಸ್ಥಾನದಲ್ಲಿದೆ. ಈ ಶತಮಾನದಲ್ಲೇ ೧೦ ದಶಲಕ್ಷ, ಹೊಸ ರಸಾಯನಿಕ ವಸ್ತುಗಳು ಸೃಷ್ಟಿಯಾಗಲಿವೆ. ಭೂಪಾಲ್‌ನ ಯೂನಿಯನ್ ಕಾರ್ಬೈಡ್ ದುರಂತ ಇನ್ನೂ ಮುಗಿದಿಲ್ಲ. ಭೂಮಿಯ ಮೇಲಿನ ಉಷ್ಣಾಂಶ ೨೦೦೦ನೇ ಇಸವಿಗೆ ೨-೩ ಡಿಗ್ರಿ ಸೆಲ್ಸಿಯಸ್ ಏರುವುದು ಸ್ಪಷ್ಟವಾಗಿದೆ. ಕುಡಿಯುವ ನೀರಿನಲ್ಲಿ ಒಂದು ಲೀಟರ್‌ಗೆ ೫೦ ಮೈಕ್ರೊಗ್ರಾಂ ಸೀಸ ಇದ್ದರೂ ದೇಹ ನಿಭಾಯಿಸಬಲ್ಲದು. ಆದರೆ ಈಗ ಇರುವುದು ೫೦೦೦ ಮೈಕ್ರೋಗ್ರಾಂ. ಹೀಗಾದರೆ ಮನುಷ್ಯ ಬದುಕಿ ಉಳಿಯುವುದಾದರೂ ಹೇಗೆ? ವಿಶ್ವಸಂಸ್ಥೆಯ ಪರಿಸರ ಯೋಜನೆ ಸಂಶೋಧನೆಗಳಿಂದ ತಿಳಿದು ಬಂದಿರುವಂತೆ ಶೇ. ೮೫ರಷ್ಟು ಕ್ಯಾನ್ಸರ್ ರೋಗಗಳಿಗೆ ಪರಿಸರದ ವಿಷವಸ್ತುಗಳೇ ಕಾರಣವಾಗಿವೆ. ಭಾರತದ ಪವಿತ್ರ ಗಂಗಾನದಿ ೧೧೫ ನಗರಗಳ ಕೋಟ್ಯಾಂತರ ಜನರ ಮಲ-ಮೂತ್ರದಿಂದ ಮಲಿನಗೊಂಡಿದೆ. ಎಣ್ಣೆ ಸಾಗಿಸುವ ಹಡಗುಗಳು ಅಪಘಾತಕ್ಕೆ ಒಳಗಾಗುವುದು ಮತ್ತು ಎಣ್ಣೆಬಾವಿಗಳಿಗೆ ಯುದ್ಧದ ಸಂದರ್ಭದಲ್ಲಿ ಬೆಂಕಿ ಬೀಳುವುದು. ಹಾಗಾಗಿ ಎಲ್ಲ ಕಡೆ ಸೀಸ ರಹಿತವಾದ ಪೆಟ್ರೋಲ್ ದೊರೆಯಬೇಕಾಗಿದೆ. ಸಹಜವಾಗಿ ದೊರೆಯುವ ವಾಯು ಮತ್ತು ಸೂರ್ಯನ ಬಳಕೆ ಇನ್ನು ಮೇಲಾದರೂ ಉಪಯುಕ್ತವಾಗಿ ಬಳಕೆಯಾಗಲಿ. ಈ ದಿಸೆಯಲ್ಲಿ ಪರಿಸರ ರಕ್ಷಣೆಯಲ್ಲಿ ನಾಲ್ಕು ಅಂಶಗಳ ಪಾತ್ರ ಮಹತ್ವದ್ದಾಗಿದೆ. ಇದನ್ನು ವಿದ್ಯಾರ್ಥಿಗಳಿಗೆ ಮನವರಿಕೆ ಮಾಡಬೇಕಾಗಿದೆ. ಪರಿಸರ ಶಿಕ್ಷಣ ಎಂದಿಗಿಂತಲೂ ಇಂದು ಅತ್ಯಗತ್ಯವಾಗಿದೆ.

**(ಕೃಪೆ : ಚಿನ್ನ ಶಿಕ್ಷಣ ಸಿರಿ)**

**ಆಲೋಚನೆಯಿಲ್ಲದ ಅಧ್ಯಯನದಿಂದ ಶ್ರಮ ವ್ಯರ್ಥ;**
**ಅಧ್ಯಯನವಿಲ್ಲದ ಆಲೋಚನೆ ಅಪಾಯಕಾರಿ.**

**- ಕನ್‌ಫ್ಯೂಷಿಯಸ್**

## ಪಂಚಾರತಿಗಳು

**- ವಿದ್ವಾನ್ ಬಿ. ಗಂಗಪ್ಪ**

ವೀರಶೈವರಲ್ಲಿ ಜಂಗಮ ಪೂಜೆಯ ವಿಧಿಯ ಅಂಗವಾಗಿ ಬೆಳಗುವ ಐದು ಆರತಿಯುಳ್ಳ ಈ ಪದವು ಪ್ರಸಿದ್ಧವಾಗಿದೆ. ಈ ಐದು ಪದಗಳಲ್ಲಿ ಪ್ರವೃತ್ತಿ ಕ್ರಮದಿಂದ ನಿಷ್ಪ್ರಪಂಚಕಾವಸ್ಥೆಯಲ್ಲಿ ತಾನೊಂದೇ ಇದ್ದು ಪರ ವಸ್ತುವು ಐದು ತೆರನಾದ ಕ್ರಮವನ್ನು ಸೂಚಿಸಲಾಗಿದೆ. ಈ ಸೃಷ್ಟಿಯ ಐದು ಮುಖಗಳು ಆ ಮಹಾಬೆಳಗಿನ ಬೆಳಕುಗಳೇ ಆದ್ದರಿಂದ ಗುಣವಿಶೇಷಗಳಿಗೆ ಅನುಗುಣವಾಗಿ ಒಂದೊಂದು ಪದ ಹೇಳಲಾಗಿದೆ.

**ಜಯ ಸಚ್ಚಿದಾನಂದ ನಿತ್ಯಪೂರ್ಣನಿಗೆ ನಿತ್ಯಪೂರ್ಣನಿಗೆ**
**ಜಯವೆಂದು ಬೆಳಗುವ ಸಕಲದೇವನಿಗೆ ||ಜಯದೇವ ಜಯದೇವ||ಪ||**

**ಬಿಂದು ಕಳೆನಾದದಿ ಜನಿಯಿಲ್ಲದದು ।**
**ಇಂದುಧರ ಮುಖಲೀಲೆ ಇಲ್ಲದಂದಂದು ।**
**ಒಂದೇ ಪರವಸ್ತು ತಾನಿರುತಿಹುದೆಂದು ।**
**ಒಂದಾರತಿಯನು ತಂದು ಬೆಳಗುವೆನಿಂದು || ಜಯದೇವ ||**

ಈ ಪಲ್ಲವಿ ಹಾಗೂ ಮೊದಲನೆಯ ಪದ್ಯದಲ್ಲಿ ಪರವಸ್ತು (ಪರಬ್ರಹ್ಮ ಅಥವಾ ಅನಾದಿ ಜಂಗಮದ) ವಿನ ಸ್ವರೂಪ ಲಕ್ಷಣ ಹಾಗೂ ನಿಷ್ಪ್ರಪಂಚಕಾವಸ್ಥೆಯನ್ನು ವರ್ಣಿಸಲಾಗಿದೆ. ಪರವಸ್ತು ನಾದಬಿಂದು ಕಳೆ (ಶಬ್ದಶಕ್ತಿ ಪ್ರಶಾಂತ) ಇವು ಯಾವವೂ (ಜಗತ್ ಪುರಕಾವಸ್ಥೆಯಲ್ಲಿ ಕಾಣುವ) ಇಲ್ಲದೆ ಇರುವ ಕಾಲದಲ್ಲಿ ಮತ್ತು ಸೃಷ್ಟಿಯ ಮೂಲ ಮುಖಗಳಿಂದ ಶಿವಗ ಸದ್ಯೋಜಾತಾದಿಮುಖಗಳು ಪ್ರಕಟವಾಗ ಮುನ್ನ (ಈ ದೃಷ್ಟ ಜಗತ್ ಸೃಷ್ಟಿಯಾಗದ ಮುನ್ನ) ಆ ಪರವಸ್ತು ತಾನೊಂದೇ ಇತ್ತು. ಅದಾದರೂ ಸತ್ ಅಂದರೆ ಕಾಲ ಪರಿಚ್ಛನ್ನತೆಯನ್ನು ಮೀರಿ ಯಾವಾಗಲೂ ಇರುವ ಚಿತ್

ಅಂದರೆ ಪ್ರಕಾಶಮಾನವಾಗಿ (ಶಕ್ತಿ) ರುದ್ರ ಆನಂದ ಅಂದರೆ ಸಮಸ್ತ ಜಗತ್ತಿನ ಆನಂದಕ್ಕೂ ತಾನೆ ಕಾರಣವಾಗಿರುವ ನಿತ್ಯವಾಗಿರುವ, ಪೂರ್ಣದಿಂದ ಪೂರ್ಣತೆಗೆ ಪೂರ್ಣವಾಗಿರುವ ಪೂರ್ಣಗುಣಗಳಿಂದ ಕೂಡಿರುತ್ತದೆ. ಹೀಗೆ ಈ ರೂಪದಲ್ಲಿ ಬೆಳಗುವ ದೇವ ದೇವನಿಂದ ಜಂಗಮ ಲಿಂಗಕ್ಕೆ ಜಯವಾಗಲಿ.

**ಗುರುಶಿಷ್ಯ ಶಿವಶಕ್ತಿ ಶಿವಜೀವರೆಂದು**
**ವರಪೂಜ್ಯಪೂಜಕ ಧಣಿಭೃತ್ಯರೆಂದು**
**ಚರಲಿಂಗ ಮುಖವು ಆಯ್ತಿರದೆ ಮತ್ತೊಂದು**
**ಎರಡಾರತಿಯನು ತಂದು ಬೆಳಗುವೆನಿಂದು ॥ ಜಯದೇವ ॥**

ಹೀಗೆ ಮೊದಲು ತಾನೊಂದೇ ಇದ್ದ ಪರವಸ್ತುವು (ಚರ ಅಥವಾ ಜಂಗಮ ಲಿಂಗವು) ಗುರು-ಶಿಷ್ಯ, ಶಿವ-ಶಕ್ತಿ ಅಥವಾ ಶಿವ-ಜೀವ ಅಥವಾ ಪೂಜ್ಯ (ಉಪಾಸ್ಯ) - ಪೂಜಕ (ಉಪಾಸಕ) ಅಥವಾ ಸ್ವಾಮಿ-ಭೃತ್ಯ ಎಂಬ ಭೇದಭಾವದಿಂದ ಎರಡಾಯ್ತು. ಆದ್ದರಿಂದ ಎರಡಾರತಿಯನ್ನು ಬೆಳಗುತ್ತೇವೆ.

**ಮೂರ್ಲಿಂಗ ಮೂರಂಗ ಮೂರ್ದೇವರೆಂದು**
**ಮೂರ್ಲೋಕ ಮೂರ್ತಕ್ಕೆ ಗುಣಮಹಾತ್ಮರೆಂದು**
**ಲೀಲೆಯಿಂ ಮೂವರಣಕ್ಕೊಳಗಾಯಿತೆಂದು**
**ಮೂರಾರತಿಯನು ತಂದು ಬೆಳಗುವೆನಿಂದು ॥ ಜಯದೇವ ॥**

ಮೊದಲು ಒಂದಾಗಿದ್ದು, ನಂತರ ಎರಡಾದ ಅದೇ (ತನ್ನ ಲೀಲೆಯಿಂದ) ಇಷ್ಟ-ಪ್ರಾಣ-ಭಾವಗಳೆಂಬ ಮೂರು ತೆರನಾಗಿ ಆ ಮೂರು ಲಿಂಗಗಳಿಗೆ ಆಶ್ರಯವಾದ ತ್ಯಾಗಾಂಗ (ಸ್ಥೂಲತನು), ಭೋಗಾಂಗ (ಸೂಕ್ಷ್ಮತನು), ಯೋಗಾಂಗ (ಕಾರಣತನು) ಎಂಬ ಮೂರು ಅಂಗವಾಗಿಯೂ ಈ ಮೂರರಿಂದ ಉಪಾಸ್ಯರಾಗಿರುವ ಗುರು-ಲಿಂಗ-ಜಂಗಮರೆಂಬ ಮೂರು ದೇವರಾಗಿಯೂ, ಸ್ವರ್ಗ-ಮರ್ತ್ಯ-ಪಾತಾಳ ಎಂಬ ಮೂರು ಲೋಕಗಳಲ್ಲಿ ಭರಿತವಾಗಿಯೂ, ಪಶು-ಪಾಶ-ಪತಿರೂಪವಾಗಿರುವ ಪ್ರಕೃತ್ಯಾತ್ಮಕವಾಗಿರುವ ಸತ್ವ-ರಜ-ಕ್ಷಮಾಗುಣಗಳ ಸಾಮ್ಯರೂಪರಾಗಿಯೂ ಈ ಎಲ್ಲ ಕಾರಣದಿಂದ ಮೂಲ ಪ್ರವಾತ್ಮಕವಾದ ಅ, ಉ, ಮ ಎಂಬ ಮೂರು ವರ್ಣಾತ್ಮಕವಾದ ಆ ಪರವಸ್ತುವಿಗೆ (ಜಂಗಮ ಲಿಂಗಕ್ಕೆ) ಮೂರರ ಸಂಕೇತವಾಗಿ ಮೂರು ಆರತಿಗಳನ್ನು ಬೆಳಗುತ್ತೇನೆ.

**ನಾಲ್ಕು ತನು ಲಿಂಗಕಳೆ ಚಿದ್ಬಿಂದುನಾದ**
**ನಾಲ್ಕು ಘಟ್ಟಿತಮಾಗಿ ಘನಲಿಂಗಮಾದ**
**ನಾಲ್ಕಾರಿಂ ಜಂಗದಾದಿ ಘನಕ್ಕೆತ್ಯವೆಂದು**
**ನಾಲ್ಕಾರತಿಯನು ತಂದು ಬೆಳಗುವೆನಿಂದು ॥ ಜಯದೇವ ॥**

ಹೀಗೆ ಮೂರ್ದೆರನಾಗಿ ತನಗನ್ಯವಾದ ಪ್ರತಿಯೊಂದು ವಸ್ತುವಿನ ಅಂತರಾಳದ ತನುಲಿಂಗ, (ಸೂಕ್ಷ್ಮಲಿಂಗ ಅಥವಾ ಪ್ರಾಣಲಿಂಗ), ಕಳೆ, ಬಿಂದು, ನಾದ ಎಂಬುದಾಗಿ ನಾಲ್ಕು ತೆರನಾಗಿ (ನಿವೃತ್ತಿಮಾರ್ಗದಿಂದ ಈ ನಾಲ್ಕು ಘಟ್ಟಿಕವಾಗಿ (ಒಟ್ಟಿಗೆ ಬೆರೆತು) ಘನಲಿಂಗ ರೂಪ (ಮಹಾಲಿಂಗ)ವಾಗಿ ಈ ಜಗದ ದೃಷ್ಟಿಗೆ ಮೂಲ ಕಾರಣವಾಗಿರುವ ಆ ಪರವಸ್ತುವಿಗೆ (ಜಂಗಮ ಲಿಂಗಕ್ಕೆ) ನಾಲ್ಕರ ಸಂಕೇತವಾದ ನಾಲ್ಕು ಆರತಿಗಳನ್ನು ಬೆಳಗುವೆ.

**ಪಂಚಮುಖವನು ಕಳೆವ ಮಾತ್ರ ಭೂತಗಳು**
**ಪಂಚೀಕರಿಸಿ ಬ್ರಹ್ಮಾಂಡ ರಚನೆಗಳು**
**ಪಂಚಾಂಗ ಲಿಂಗ ಶ್ರೀ ವಿರೂಪಾಕ್ಷಂಗೆಂದು**
**ಪಂಚಾರತಿಯನು ತಂದು ಬೆಳಗುವೆನಿಂದು ॥ ಜಯದೇವ ॥**

ನಂತರ ಆ ಪರವಸ್ತುವಿನ ಸದ್ಯೋಜಾತ-ವಾವದೇವ-ಅಘೋರ-ತತ್ಪುರುಷ-ಈಶಾನವೆಂಬ ಪಂಚಮುಖಗಳಿಂದ ಪೃಥವೀ-ಅಪ್ಪ-ತೇಜಸ್ಸು-ವಾಯು-ಆಕಾಶವೆಂಬ ಪಂಚಮಹಾಭೂತಗಳು ಉದಿಸಿ ಆ ಪಂಚಭೂತಗಳ ಪಂಚೀಕರಣದಿಂದ ಬ್ರಹ್ಮಾಂಡ ಪಿಂಡಾಂಡಗಳ ರಚನೆಯಾಗಿ ಈ ಸಮಷ್ಟಿ ರಚನೆಗಾಗಿ ಕಾರಣವಾಗಿರುವ ನಿಷ್ಠಾಂಗ-ದೃಷ್ಟಾಂಗ-ದ್ರಷ್ಟಾಂಗ-ದೃಷ್ಟ್ಯಂಗ - ನಷ್ಟಂಗವೆಂಬ (ಲಿಂಗಯೋಗದಲ್ಲಿ ಬರುವ ಪಂಚಾಂಗಗಳು) ಪಂಚಾಂಗಲಿಂಗ ರೂಪನಾಗಿರುವ ವಿರೂಪಾಕ್ಷನಿಗೆ (ತತ್ಸರೂಪನಾದ) ಜಂಗಮ ಲಿಂಗಕ್ಕೆ ಐದು ಐದರ ಸಂಕೇತವಾಗಿ ಆರತಿ ಬೆಳಗುತ್ತೇನೆ.

| | |
|---|---|
| ಒಂದು | - ಪರವಸ್ತು |
| ಎರಡು | - ಗುರು-ಶಿಷ್ಯ / ಶಿವಶಕ್ತಿ / ಶಿವ-ಜೀವ/ ಸ್ವಾಮಿ-ಭೃತ್ಯ |
| ಮೂರು ಲಿಂಗ | - ಇಷ್ಟಲಿಂಗ-ಪ್ರಾಣಲಿಂಗ-ಭಾವಲಿಂಗ |
| ಮೂರು ಅಂಗ | - ತ್ಯಾಗಾಂಗ-ಭೋಗಾಂಗ-ಯೋಗಾಂಗ |
| ಮೂರು ದೇವರು | - ಗುರು-ಲಿಂಗ-ಜಂಗಮ |
| ಮೂರುಲೋಕ | - ಮರ್ತ್ಯ-ಭೂಲೋಕ-ಸ್ವರ್ಗ |
| ಮೂರು ತತ್ವ | - ಜೀವ-ಪಶುಪತಿ(ಶಿವ)-ಪಾಶ(ಜಗತ್ತು) |
| ಮೂರುಗುಣ | - ಸತ್ವ-ರಜಸ್-ತಮೋಗುಣ |
| ನಾಲ್ಕು | - ಪ್ರಾಣಲಿಂಗ-ಕಳೆ-ಬಿಂದು-ನಾದ |
| ಪಂಚಮುಖ | - ಸದ್ಯೋಜಾತ-ವಾಮದೇವ-ಅಘೋರ-ತತ್ತುಪುಷ-ಈಶಾನ |
| ಪಂಚಭೂತ | - ಪೃಥ್ವೀ-ಅಪ್ಪ-ತೇಜಸ್ಸು-ವಾಯು-ಆಕಾಶ |
| ಪಂಚಾಂಗಲಿಂಗ | - ನಿಷ್ಠಾಂಗ-ದೃಷ್ಟಾಂಗ-ದೃಷ್ಟ್ಯಂಗ-ದೃಷ್ಟ್ಯಂಗ-ನಷ್ಟಾಂಗ |





# ಶ್ರೀ ಮಠದಲ್ಲಿ  ಹಬ್ಬದ ಸಡಗರ

ದಾಸೋಹದ ಮಹಾಮನೆಯಾದ ಶ್ರೀಮಠದಲ್ಲಿ ಸಂಪ್ರದಾಯದಂತೆ ಸಂಕ್ರಾಂತಿ, ಮಹಾಶಿವರಾತ್ರಿ, ಯುಗಾದಿ, ಬಸವ ಜಯಂತಿ, ಗಣೇಶ, ವಿಜಯದಶಮಿ, ದೀಪಾವಳಿ ಹಬ್ಬಗಳನ್ನು ವೈಶಿಷ್ಟ್ಯಪೂರ್ಣವಾಗಿ ಆಚರಿಸುತ್ತಾ ಬಂದಿದೆ. ಆಯಾ ಹಬ್ಬಗಳಲ್ಲಿನ ವಿಶೇಷ ಅಡುಗೆಯನ್ನು ಮಾಡಲಾಗುತ್ತಿದೆ. ದೂರದ ಊರುಗಳಿಂದ ತಂದೆ-ತಾಯಿಗಳನ್ನು ಬಿಟ್ಟು ಬಂದ ಸುಮಾರು ಏಳು ಸಾವಿರ ಮಕ್ಕಳಿಗೆ ಹಬ್ಬಕ್ಕೆ ಊರಿಗೆ ಹೋಗಲಾಗಲಿಲ್ಲವಲ್ಲ ಎಂಬ ಭಾವನೆ ಬರಬಾರದೆಂಬ ಉದ್ದೇಶದಿಂದ ಸಡಗರದಿಂದ ಆಚರಿಸಲಾಗುತ್ತಿದೆ. ಪರಮಪೂಜ್ಯ ಶ್ರೀಗಳವರಿಗೆ ಮಕ್ಕಳನ್ನು ಕಂಡರೆ ಅಪಾರ ಪ್ರೀತಿ. ಅವರು ಸದಾ ನಗುನಗುತ್ತಾ ಸಂತೋಷವಾಗಿರಬೇಕೆಂಬುದು ಅವರ ಆಶಯ. ಪ್ರತಿವರ್ಷದಂತೆ ಈ ಸಲವೂ ಗಣೇಶನ ಹಬ್ಬವನ್ನು ವಿಜೃಂಭಣೆಯಿಂದ ಆಚರಿಸಲಾಯಿತು. ಮಕ್ಕಳಿಗೆ, ಭಕ್ತಾದಿಗಳಿಗಾಗಿ ಇಪ್ಪತ್ತು ಸಾವಿರಕ್ಕೂ ಹೆಚ್ಚು ಕಡುಬುಗಳನ್ನು ಪರಮಪೂಜ್ಯ ಶ್ರೀಶ್ರೀಗಳವರ ಮಾರ್ಗದರ್ಶನದಲ್ಲಿ ಮಾಡಲಾಯಿತು. ಕಿರಿಯ ಶ್ರೀಗಳು, ಮಠದ ಸಿಬ್ಬಂದಿಯೊಂದಿಗೆ ಕುಳಿತು ಕಡುಬನ್ನು ಮಾಡಿದರು. ಪರಮಪೂಜ್ಯ ಶ್ರೀಗಳು ತಾವೇ ನಿಂತು ಮಕ್ಕಳಿಗೆ ಬಡಿಸಲು ತಟ್ಟೆಗಳಿಗೆ ಕಡುಬುನ್ನು ತುಂಬಿಕೊಡುತ್ತಿದ್ದ ದೃಶ್ಯ ಸ್ಮರಣೀಯ.



ವಿಘ್ನನಿವಾರಕ ಗಣೇಶನ ಪೂಜೆಯಲ್ಲಿ ಕಿರಿಯ ಶ್ರೀಶ್ರೀಗಳು



ಕಡುಬನ್ನು ಮಾಡಲು ಹಿಟ್ಟು ತಯಾರಿಸುತ್ತಿರುವುದು



ಕಡುಬಿನಲ್ಲಿ ತುಂಬಲು ಸಿದ್ಧವಾಗಿರುವ ಸೂಸಲುಪುಡಿ





ಕಡುಬಿನ ಅಂಚನ್ನು ಮಡಚುತ್ತಿರುವ ಪರಮಪೂಜ್ಯ ಶ್ರೀಶ್ರೀಗಳವರು







ಸಿದ್ಧಮಾಡಿದ ಕಡುಬಿನ ರಾಶಿಯನ್ನು ವೀಕ್ಷಿಸುತ್ತಿರುವ ಪರಮಪೂಜ್ಯ ಶ್ರೀಶ್ರೀಗಳವರು





ಕಾಯಾಲು ಸಿದ್ಧತೆಯಲ್ಲಿ



ಕಡುಬು ಸಿದ್ಧತೆ - ಒಂದು ನೋಟ



ಚಿತ್ರಾನ್ನದ ರಾಶಿಯನ್ನು ವೀಕ್ಷಿಸುತ್ತಿರುವ ಪರಮಪೂಜ್ಯ ಶ್ರೀಶ್ರೀಗಳು



ಪ್ರಸಾದ ಬಡಿಸಲು ಸಿದ್ಧವಾಗಿ ನಿಂತಿರುವ ಮಕ್ಕಳೊಂದಿಗೆ ಪರಮಪೂಜ್ಯ ಶ್ರೀಶ್ರೀಗಳವರು





ಪರಮಪೂಜ್ಯ ಶ್ರೀಶ್ರೀಗಳವರು ಸಿದ್ಧವಾಗಿರುವ ಕಡುಬುಗಳನ್ನು ಬಡಿಸಲು ತಟ್ಟೆಗಳಿಗೆ ತುಂಬುತ್ತಿರುವುದು.







ದಾಸೋಹ ಮಂದಿರದಲ್ಲಿ ಶ್ರೀಶ್ರೀಗಳವರು ಮಕ್ಕಳಿಗೆ ಊಟ ಬಡಿಸಲು ಮಾರ್ಗದರ್ಶನ ಮಾಡುತ್ತಿರುವುದು. ಮಕ್ಕಳು ನಡೆದಾಡುವ ದೇವರಿಗೆ ಭಕ್ತಿ ಸಮರ್ಪಿಸುತ್ತಿರುವ ಒಂದು ಸುಂದರ ನೋಟ

## ಶ್ರೀಮಠದ ದಾಸೋಹವನ್ನು ಕುರಿತು.......

"ಅನ್ನವನು ಇಕ್ಕುವುದು ನನ್ನಿಯನು ನುಡಿಯುವುದು, ತನ್ನಂತೆ ಪರರ ಬಗೆವೊಡೆ ಕೈಲಾಸ ಬಿನ್ನಾಣವಕ್ಕು ಸರ್ವಜ್ಞ" ಎಂಬ ಸರ್ವಜ್ಞಮೂರ್ತಿಯ ಅಮರವಾಣಿ ಶ್ರೀಮಠದಲ್ಲಿ ಸಾಕಾರವಾಗಿ ಮೈದಳೆದಿದೆ. ಪ್ರತಿದಿನವೂ ಆರುಸಾವಿರ ಜನಕ್ಕೆ ನಿತ್ಯ ದಾಸೋಹವನ್ನಿಡುವುದು ಹುಡುಗಾಟದ ಮಾತಲ್ಲ. ಇದಕ್ಕೆ ಅಪಾರ ಭಾವಶುದ್ಧಿಬೇಕು. ವಿಶುದ್ಧ ಸಂಕಲ್ಪಸಿದ್ಧಿಬೇಕು. ಅಖಂಡ ಕ್ರಿಯಾಸಿದ್ಧಿಬೇಕು. ಇವೆಲ್ಲವೂ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳಲ್ಲಿ ಯಥೇಚ್ಛವಾಗಿವೆ. ಇಲ್ಲಿ ಇದೀಗ ತೊಂಭತ್ತಕ್ಕೂ ಅಧಿಕ ಸಂಖ್ಯೆಯಲ್ಲಿರುವ ವಿವಿಧ ಶಿಕ್ಷಣ ಸಂಸ್ಥೆಗಳು ಶ್ರೀ ಶ್ರೀಗಳ ವಿದ್ಯಾಭಿಲಾಷೆ, ವಿದ್ಯಾಪ್ರಸಾರ ವಿದ್ಯಾಪಕ್ಷಪಾತಗಳಿಗೆ ಜ್ವಲಂತ ಸಾಕ್ಷಿಗಳಾಗಿವೆ.

- ಶ್ರೀ ರಾಘವೇಂದ್ರ ಸ್ವಾಮಿಗಳು

ದಾಸೋಹದಲ್ಲಿ ನೀಡುವವನೇ ದಾಸ. ಪಡೆದುಕೊಳ್ಳುವವನೇ ಒಡೆಯ. ಶ್ರೀ ಸಿದ್ಧಗಂಗಾ ಮಠದಲ್ಲಿ ಅನ್ನ ದಾಸೋಹ, ಜ್ಞಾನದಾಸೋಹ ಕಾರ್ಯಗಳು ನಿರಂತರವಾಗಿ ನಡೆದುಕೊಂಡು ಬಂದಿವೆ. ಆ ಮಠ ವಿದ್ಯಾರ್ಥಿಗಳಿಗೆ ಒದಗಿಸಿದಷ್ಟು ಆಶ್ರಯವನ್ನು ಒದಗಿಸಿಕೊಟ್ಟ ಇನ್ನೊಂದು ಮಠ, ಇಲ್ಲವೆ ಸಂಸ್ಥೆ ಭಾರತದಲ್ಲಿಯೇ ಆಗಲಿ, ಜಗತ್ತಿನಲ್ಲಿಯೇ ಆಗಲಿ ಇಲ್ಲ ಎಂದು ಹೇಳಿದರೆ ಅದರಲ್ಲಿ ಅತಿಶಯೋಕ್ತಿಯೇನೂ ಇಲ್ಲ.

- ಡಾ. ಪಾಟೀಲ ಪುಟ್ಟಪ್ಪ



# ಕಪಾಳಕ್ಕೆ ಹೊಡೆದರು....ಊಟ ಮಾಡಿಸಿದರು

ದಿನಾಂಕ ೯.೭.೨೦೦೦ದ ಭಾನುವಾರ ಮಾಗಡಿ ತಾಲ್ಲೂಕು ಕಂಚುಗಲ್ ಬಂಡೇಮಠದಲ್ಲಿ ಲಿಂಗೈಕ್ಯ ಶ್ರೀ ಶಿವರುದ್ರಸ್ವಾಮಿಗಳವರ ಮೂರನೆ ವರ್ಷದ ಪುಣ್ಯಸ್ಮರಣೆ ಹಾಗೂ ಗದ್ದುಗೆ ಕಟ್ಟಡದ ಪ್ರಾರಂಭೋತ್ಸವ ಸಂದರ್ಭ. ಪರಮಪೂಜ್ಯ ಶ್ರೀ ಸಿದ್ಧಗಂಗಾಶ್ರೀಗಳವರ ಸಾನ್ನಿಧ್ಯ. ಕನಕಪುರ ದೇಗುಲಮಠದ ಪೂಜ್ಯ ಶ್ರೀ ಮುಮ್ಮಡಿ ನಿರ್ವಾಣ ಮಹಾಸ್ವಾಮಿಗಳವರ ಅಧ್ಯಕ್ಷತೆ. ಮಾಗಡಿಕ್ಷೇತ್ರದ ಶಾಸಕರಾದ ಶ್ರೀ ಹೆಚ್.ಎಂ. ರೇವಣ್ಣನವರು, ನೆಲಮಂಗಲ ಕ್ಷೇತ್ರದ ಶಾಸಕರಾದ ಶ್ರೀ ಅಂಜನಮೂರ್ತಿಯವರು ಮುಖ್ಯ ಅತಿಥಿಗಳು. ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಗೊ.ರು. ಚನ್ನಬಸಪ್ಪನವರು ಉಪನ್ಯಾಸಕರು. ಕಿಕ್ಕಿರಿದ ಭಕ್ತಸ್ತೋಮ.

ಐವತ್ತು-ಅರವತ್ತರ ದಶಕ. ಶ್ರೀ ಸಿದ್ಧಗಂಗಾ ಮಠದಲ್ಲಿ ನಾನು ಓದುತ್ತಿದ್ದೆ. ಸುಮಾರು ಎಂಟುನೂರು ವಿದ್ಯಾರ್ಥಿಗಳಿದ್ದೆವು. (ಈಗ ಎಂಟು ಸಾವಿರ ವಿದ್ಯಾರ್ಥಿಗಳಿದ್ದಾರೆ) ಹುಡುಗತನದ ಎಲ್ಲ ತುಂಟತನಕ್ಕೆ ನಾನು ಹೆಸರಾಗಿದ್ದೆ. ಒಮ್ಮೆ ಶ್ರೀಗಳಿಗೆ ಗೊತ್ತಾಗದಂತೆ ಕದ್ದು ಸಿನಿಮಾಕ್ಕೆ ಹೋಗಿ ಬಂದಿದ್ದನ್ನು ಪತ್ತೆ ಮಾಡಿದ ಶ್ರೀ ಬಂಡೆ ಚಂದ್ರಶೇಖರಯ್ಯ ಪ್ರಶ್ನಿಸಿದರು. ''ಏನೋ ಸಿನಿಮಾಕ್ಕೆ ಹೋಗಿದ್ದೇನೋ?'' ಎಂದರು. ''ಹೌದು, ಏನೀಗ?'' ಏರುದನಿಯಲ್ಲೇ ಪ್ರತ್ಯುತ್ತರಿಸಿದೆ. ''ಸ್ವಾಮಿಗಳಿಗೆ ಹೇಳ್ತೀನಿ ನೋಡು'' ಎಂದು ಬೆದರಿಕೆ ಹಾಕಿದರು. ''ಹೇಳ್ಕೋ ಹೋಗು, ನನಗೇನು'' ಎಂದುಬಿಟ್ಟೆ. ಶ್ರೀಗಳಿಗೆ ವಿಷಯ ತಿಳಿಯಿತು. ಊಟದ ಮನೆಯಲ್ಲಿ ಊಟಕ್ಕೆ ಕುಳಿತಿದ್ದೆ ಎಲ್ಲರ ಜೊತೆ ಸಾಲಿನಲ್ಲಿ. ಶ್ರೀಗಳು ಬಂದರು. ನನಗೆ ಭಯವಾಯಿತು. ಕಾಣದಂತೆ ಎರಡೂ ಮೊಣಕಾಲಮಧ್ಯೆ ತಲೆಯಿಟ್ಟು ಕುಳಿತುಕೊಂಡೆ. ಶ್ರೀಗಳು ಕಾಣದಿರಲೆಂದು ನನ್ನ ಹವಣಿಕೆ. ಉಷ್ಟ್ರಪಕ್ಷಿ ಪ್ರಾಣಾಪಾಯದಿಂದ ತಪ್ಪಿಸಿಕೊಳ್ಳಲು ಮರಳಲ್ಲಿ ತಲೆ ಹುದುಗಿಸಿಕೊಂಡು ತಾನು ಯಾರಿಗೂ ಕಾಣುವುದಿಲ್ಲ ಎಂದು ತಿಳಿಯುತ್ತದಂತೆ. ಅದೇ ರೀತಿ ನಾನೂ ಮುದುಡಿ ಕುಳಿತೆ. ಆದರೆ ಸ್ವಾಮಿಗಳು ನೇರವಾಗಿ ನನ್ನ ಬಳಿಗೇ ಬಂದರು. ''ಏಳೋ ಮೇಲೆ'' ಎಂದರು. ಎದ್ದುನಿಂತೆ. ''ಕದ್ದು ಸಿನಿಮಾಕ್ಕೆ ಹೋಗಿದ್ದೋ'' ಎಂದರು. ''ಸ್ವಾಮಿಗಳಿಗೆ ಹೇಳ್ಕೋ ಹೋಗೋ'' ಎಂದೆಯೇ ಎಂದರು. ಸುಮ್ಮನೆ ನಿಂತಿದ್ದೆ. ತೋಳು ತೊಡೆ ಎಲ್ಲ ನಡುಗುತ್ತಿದ್ದವು. ''ಎತ್ತೋ ತಲೆ'' ಎಂದವರೇ ಬೀಸಿ ಕಪಾಳಕ್ಕೆ ಹೊಡೆದರು. ಕಣ್ಣೀರು ದಳದಳ ಇಳಿದವು. ಶ್ರೀಗಳವರ ಏಟಿಗಿಂತ ಅಷ್ಟು ಜನರ ಮುಂದೆ ಅವಮಾನವಾಯಿತಲ್ಲಾ ಎಂದು ಒಳಗೊಳಗೇ ಬುಸುಗುಟ್ಟಿದೆ. ಶ್ರೀಗಳು ಮುಂದೆನಡೆದು ಊಟದ ಮನೆಯಿಂದ ಆಚೆಗೆ ನಡೆದದ್ದೇ ತಡ. ತಟ್ಟೆಯನ್ನು ಬಿಸಾಕಿ ಹೊರಬಂದು ತೇರು ವೇದಿಕೆಯ ಮೇಲೆ ಅಳುತ್ತಾ ಕುಳಿತುಬಿಟ್ಟೆ. ವಿಷಯ ಸ್ವಾಮಿಗಳಿಗೆ ಗೊತ್ತಾಯಿತು. ಹುಡುಕಿಸಿದರು. ಯಾರೋ ನಾನಿರುವ ಜಾಗದ ಸುಳಿವು ಕೊಟ್ಟರು. ಶ್ರೀಗಳು ಅಲ್ಲಿಗೇ ಬಂದರು. ಅಷ್ಟರೊಳಗೆ ಉಗ್ರಾಣದ ಮ್ಯಾನೇಜರ್ ಆಗಿದ್ದ ಶ್ರೀ ಕೆಂಪನಂಜಶಾಸ್ತ್ರಿಗಳು ಅಲ್ಲಿಗೆ ಬಂದರು. ಬಂದವರೇ ''ಬುದ್ಧೀ, ಈ ಹುಡುಗ ಊಟಾನೂ ಮಾಡ್ದೆ ತಟ್ಟೆ ಎಸ್ದು ಬಂದುಬಿಡ್ತು'' ಎಂದರು. ಕರುಣಾಮಯಿ ಶ್ರೀಗಳು ತಕ್ಷಣವೇ ಶಾಸ್ತ್ರಿಗಳಿಗೆ ಹೇಳಿದರು ''ಕರ್‍ಕೊಂಡ್ಹೋಗಿ ಮೊದಲು ಊಟ ಮಾಡ್ಸಿ'' ಎನ್ನುತ್ತಾ, ನನ್ನ ಮೈದಡವಿ ''ಹಾಗೆಲ್ಲ ಹೇಳ್ದೆ ಕೇಳ್ದೆ ಹೋಗ್ಬಾರ್ದು, ಕೇಳಿದವರಿಗೆ ಒರಟಾಗಿ ಉತ್ತರ ಕೊಡಬಾರ್ದು ಗೊತ್ತಾಯ್ತಾ. ಈಗ ಊಟ ಮಾಡ್ಹೋಗು'' ಎಂದು ತಾಯಿ ಮುದ್ದಿಸುವಂತೆ ಪ್ರೀತಿಗರೆದರು. ಶ್ರೀಗಳವರು ಇದನ್ನು ಮರೆತಿರಬಹುದು. ನಾನೆಂದೂ ಮರೆತಿಲ್ಲ. ಅವರ ಕಾರುಣ್ಯದಿಂದ, ಆಶೀರ್ವಾದದಿಂದ ನಾನೂ ಒಬ್ಬ ಮನುಷ್ಯನಾಗಿದ್ದೇನೆ ಇಂದು ಎಂದವರು ಶ್ರೀ ಬಿ.ಎಸ್. ಪರಮಶಿವಯ್ಯ ಅವರು. ಕರ್ನಾಟಕ ವೀರಶೈವ ವಿದ್ಯಾಭಿವೃದ್ಧಿ ನಿಧಿಯ ಅಧ್ಯಕ್ಷರು, ಬೆಂಗಳೂರು ವೀರಶೈವ ಸಹಕಾರಿ ಬ್ಯಾಂಕಿನ ಅಧ್ಯಕ್ಷರು. ಇದನ್ನು ಕೇಳಿದಾಗ ತಟ್ಟನೆ ಬಸವಣ್ಣನವರ 'ಎಡದ ಕೈಯಲಿ ಹಾಲು ಬಟ್ಟಲು, ಬಲದ ಕೈಯಲಿ ಓದು ಗಟ್ಟಿಗೆ' ಎಂಬ ಮಾತು ನೆನಪಾಯಿತು. ಶ್ರೀಗಳವರ ಪ್ರೀತಿ ದರ್ಶನವೂ ಆಯಿತು.

- ಹೆಚ್.ವಿ. ವೀರಭದ್ರಯ್ಯ





# ಅರವತ್ತುಮೂರು ಪುರಾತನ ಶರಣರು

(ಕಳೆದ ಸಂಚಿಕೆಯಿಂದ)



- ಡಾ. ಬಿ.ಎಸ್. ಸ್ವಾಮಿ
ಕಾರ್ಯಕ್ರಮ ನಿರ್ವಹಣಾಧಿಕಾರಿ,
ಆಕಾಶವಾಣಿ, ಬೆಂಗಳೂರು.

ತಂದೆಯ ಉಪದೇಶ ಫಲಕಾರಿಯಾಗಲಿಲ್ಲ. "ಈ ಮರಳು ಲಿಂಗ ಪೂಜೆ ಬಿಟ್ಟು, ಹಸು ಮೇಯಿಸಿಕೊಂಡು ಬಾ" ಎಂದ.

ದನ ಮೇಯಿಸುತ್ತಾ ಲಿಂಗ ಪೂಜೆ ಮಾಡಬಹುದು ಎಂದು ಈ ಕಾಯಕ ಒಪ್ಪಿದ. ವಿಭೂತಿ ಧರಿಸಿಕೊಂಡು ಕಾವೇರಿ ತೀರದಲ್ಲಿ ಹೂವುಗಳನ್ನು ಆರಿಸಿ ಭಕ್ತಿಯಿಂದ ಮರಳು ಲಿಂಗ ಮಾಡಿ ಅದಕ್ಕೆ ಪೂಜೆ ಮಾಡಲಾರಂಭಿಸಿದ. ಈ ವಿಚಾರವನ್ನು ಸ್ನೇಹಿತರು ಆತನ ತಂದೆಯಲ್ಲಿ ಹೇಳಿದರು. " ಹಾಲನ್ನು ಮರಳು ಲಿಂಗಕ್ಕೆ ಕರೆದ " ಎಂದು ಒಮ್ಮೆ ತಂದೆ ಬಂದು ನೋಡಿ ಲಿಂಗವನ್ನು ಕಾಲಲ್ಲಿ ಒದ್ದು, ಮಗನ ಮೇಲೆ ರೇಗಿದನು. ಕೋಪಗೊಂಡ ಮಗನು ತಂದೆಯ ಶಿರವನ್ನು ಕೊಡಲಿಯಿಂದ ಕತ್ತರಿಸಿದ. ಆಗ ಶಿವನು ಆತನ ಭಕ್ತಿಗೆ ಮೆಚ್ಚಿ, ಪ್ರತ್ಯಕ್ಷನಾಗಿ ಆತನನ್ನು ಕೈಲಾಸಕ್ಕೆ ಕರೆದೊಯ್ದು ಗಣಪದವಿಯನ್ನಿತ್ತ.

ಕಥೆಯಲ್ಲಿ ಚೋಳದೇಶದ ಕಾವೇರಿ ತೀರದಲ್ಲಿ ನಲ್ಲೂರೆಂಬ ಪುರ. ಅಲ್ಲಿ ಶಿವಭಕ್ತ ಅಚ್ಯುತ ಭಟ್ಟ ಹಾಗೂ ಸಾವಿತ್ರಿ ಎಂಬ ಬ್ರಾಹ್ಮಣ ದಂಪತಿಗಳಿಗೆ ಮಕ್ಕಳಿರಲಿಲ್ಲ. ಪಿಳ್ಳೆಯಾರ್ ಗಣಪತಿ ನೋಂಪಿ ಮಾಡಿ ಗಂಡು ಮಗುವನ್ನು ಪಡೆದರು. ಹುಟ್ಟಿದಂದಿನಿಂದ ಹನ್ನೆರಡು ದಿನ ಚಂಡಿ ಹಿಡಿದುದರಿಂದಲೂ ಪಿಳ್ಳೆಯಾರ್ ಅನುಗ್ರಹದಿಂದ ಪಡೆದ ಮಗುವಿಗೆ ಚಂಡೇಶ ಪಿಳ್ಳೆ ಎಂದು ಹೆಸರಿಟ್ಟರು. ಬಡತನ ಬರಲು ಮಗನನ್ನು ದನ ಕಾಯಲು ಹಾಕಿದರು. ಆತನಿಗೆ ದನ ಕಾಯುವಾಗ ಶಿವ ಜಂಗಮ ವೇಷದಿಂದ ಬಂದು ಮಂತ್ರೋಪದೇಶ ಮಾಡಿ ಮರಳು ಲಿಂಗ ಪೂಜೆ ಮಾಡೆಂದು ಹೇಳಿ ಹೋದ.

## ೪೦. ಸಾಂಖ್ಯನಾಯರು

ಚೋಳದೇಶದಲ್ಲಿ ಆರೂರ್ ಎಂಬ ಊರು. ಸಂಖ್ಯನಾಯರು ಹುಟ್ಟು ಜೈನನಾದರೂ ಶಿವಭಕ್ತನಾಗಿ ಶಿವನ ಭಕ್ತಿ ಪ್ರಸಾದವನ್ನು ಸ್ವೀಕರಿಸುವ ಆಚಾರ ನಿಷ್ಠನಾಗಿದ್ದ ಶಿವನನ್ನು ಹೇಗೆ ಪೂಜಿಸಬೇಕೆಂದಿಲ್ಲ. ಅವರವರ ಇಷ್ಟದ ರೀತಿ ಪೂಜಿಸಿ ಆತನನ್ನು ಒಲಿಸಿಕೊಳ್ಳಬಹುದು. ಹೂವಿನ ಬದಲು ಕಲ್ಲನ್ನು ಇಟ್ಟು ಪೂಜಿಸಬಹುದು ಎಂದು ನಂಬಿದ್ದ. ಆತ ದನ ಕಾಯುವ ಕೆಲಸ ಮಾಡುತ್ತಿದ್ದ. ಕಲ್ಲಿನ ಶಿವನಿಗೆ ಕಲ್ಲಿಂದಲೇ ಪೂಜೆ ಮಾಡಬೇಕೆಂದು ಮಾಡಿ ಹರಗುರು ಚರಮೂರ್ತಿಗಳಿಗೆ ಪ್ರಸಾದ ಹಂಚುತ್ತಿದ್ದ. ಒಂದು ದಿನ ಅವನು ಆತನಿಗೆ ಎಲ್ಲೂ ಕಲ್ಲು ದೊರೆಯದಂತೆ ಮಾಡಿದ. ಆತ ನೀರು ಕುಡಿಯಲಿಲ್ಲ. ಪ್ರಸಾದ ಸೇವಿಸಲಿಲ್ಲ. ಒಮ್ಮೆ ಒಂದು ಗುಂಡುಕಲ್ಲು ಸಿಕ್ಕಿತು. ಆಗ ಧನ್ಯ ಎಂದು ಅದನ್ನು ಚೂರು ಮಾಡಿ ಪೂಜಿಸಬೇಕು ಎಂದು ಲಿಂಗದ ಮೇಲೆಸೆಯಲು ಲಿಂಗದೊಳಗಿಂದ ಶಿವನು ಪ್ರತ್ಯಕ್ಷನಾಗಿ ಆತನಿಗೆ ಗಣಪದವಿ ನೀಡಿದ.

## ೪೧. ಕುಲ ಚಂಗರು (ಕುಳಚಂಗರ್)

ಚೋಳ ಮಂಡಲ ರಾಜನಾದ ಕುಳಚಂಗರ್ ಎಷ್ಟು ಪರಾಕ್ರಮಿಯೋ ಅಷ್ಟೇ ಶಿವಭಕ್ತ. ಆತ ಶಿವ ಕೀರ್ತನೆ, ಶಿವಪೂಜೆ, ಸತ್ಸಂಗ, ಜಂಗಮ ಸೇವೆಯಲ್ಲಿ ಆನಂದಪಡುತ್ತಿದ್ದ. ರಾಣಿ ಬೊಲ್ಲಾಡಿನಾಚಿ ಕಂಡರೆ ಆತನಿಗೆ ಪ್ರಾಣ.

ಒಮ್ಮೆ ರಾಣಿಯೊಡನೆ ಕುಳ ಚಂಗರ್ ತಿರುವಾರೂರೊಡೆಯನ್ ಪೂಜೆಗೆ ಪರಿವಾರ ಸಮೇತ ದೇವಸ್ಥಾನಕ್ಕೆ ಬಂದಿದ್ದ. ಅಲ್ಲಿ ಮಹಾಶಿವಭಕ್ತ ಚಿರುತೊಣೆಯಾಂಡರ್ ಹೂವು ಕಟ್ಟುತ್ತಿದ್ದರು. ರಾಣಿ ಆ ಹೂವನ್ನು ಎತ್ತಿ ಮೂಸಲು ಆ ಭಕ್ತ ಈಕೆಯ ಮೂಗು ಕೊಯ್ದ. ಅದನ್ನು ನೋಡಿದ ಕುಳಚಂಗರ್ ಆಕೆ ಎತ್ತಿದ ಕೈಯನ್ನು ಏಕೆ ಬಿಟ್ಟಿರಿ ಎಂದು ಆಕೆಯ ಕೈಯನ್ನು ಕತ್ತರಿಸುವನು. ಆಗ ಆತನ ಭಕ್ತಿ ಮೆಚ್ಚಿ ಶಿವ ಆತನಿಗೆ ಗಣಪದವಿ ನೀಡಿದ.

## ೪೨. ಓಹಿಲರು

ಚೋಳ ದೇಶದ ಪೊನ್ನ ಎಂಬ ಪುರದಲ್ಲಿ 'ಓಹಿಲನೆಂಬ' ಶಿವಭಕ್ತ ಹೊರಗಿನ ಆಡಂಬರವಿಲ್ಲದೆ ಲಿಂಗವನ್ನು ಭಕ್ತಿಯಿಂದ ಪೂಜಿಸುತ್ತಾ ಅಷ್ಟಾಂಗ ಯೋಗಗಳಲ್ಲಿ ಬಲಿಷ್ಠನಾದನು. ಪ್ರಪಂಚವೇ ಲಿಂಗಮಯವಾಯಿತು. ಒಮ್ಮೆ ಕಾವೇರಿ ನದಿ ತೀರದಲ್ಲಿ ಶಿವ ಪೂಜೆಯನ್ನು ಅದ್ದೂರಿಯಾಗಿ ಮಾಡಬೇಕೆನಿಸಿತು. ಹಾಗೆಯೇ ಮಾಡಿ, ಪೂಜಿಸಿ, ಹಾಡಿ, ನರ್ತಿಸಿ, ಸಮಾಧಿ ಹೊಂದಿದನು. ಆತ ಅಂತರ್ಯ ಭಾವ ಪೂಜೆಯಿಂದ ಪ್ರಾಣಲಿಂಗ ಎನಿಸಿಕೊಂಡ. ಒಮ್ಮೆ ಓಹಿಲರು ದಾರಿಯಲ್ಲಿ ಬರುತ್ತಿರಲು ಒಬ್ಬ ಭಕ್ತ ಓಹಿಲರಿಗೆ ನಮಸ್ಕರಿಸಿ ಕೇಳಿದ, "ತಾವೂ ದಿನವೂ ಕೌತುಕದಲ್ಲಿರುವಿರಿ ಇದರ ಕಾರಣವೇನು?" ಎಂದು.

"ದೇವ ಕುಸುಮಗಳಿಂದ ಪೂಜಿಸಿರುವೆ. ಇದರಿಂದ ಶಿವನಿಗೂ, ಅರ್ಚಕನಾದ ನನಗೂ ಬಹಳ ಆನಂದವಾಯಿತು" ಇದನ್ನು ಕೇಳಿದ ಆತ ಅಚ್ಚರಿಯಿಂದ "ಮಾನವರು ದೇವಲೋಕದ ಹೂವಿನಿಂದ ಪೂಜಿಸುವವರೇ?" "ಹೌದು" ಎಂದು. ತನ್ನ ಪೂಜಾ ವಿಧಾನವನ್ನು ತೋರಲು ಅಲ್ಲಿಂದ ಸುರಗಿಯಿಂದ ಹೊಟ್ಟೆಸೀಳಿ ದೇವ ಕುಸುಮಗಳಿಂದ ಪೂಜಿಸಿದ. ಶಿವನನ್ನು ತೋರಿಸಿದ. ಈತನ ಪೂಜೆಗೆ ಮೆಚ್ಚಿ ಶಿವನು ಪ್ರತ್ಯಕ್ಷನಾದ. ಓಹಿಲ ನಮಸ್ಕರಿಸುತ್ತಿರಲು ಆತನನ್ನು ಕೈಲಾಸಕ್ಕೆ ಒಯ್ದು ಗಣಪದವಿಯನ್ನಿತ್ತ.

ಮತ್ತೊಂದು ಆಕರ ಗ್ರಂಥದಲ್ಲಿ ಗುಜರಾತ ದೇಶದ ವಿಲಾಸವತಿ ಪಟ್ಟಣದ ರಾಜನಾದ ಕುಂಭರಾಯನಿಗೆ ಹಲವಾರು ವರ್ಷ ಪುತ್ರ ಸಂತಾನವಿಲ್ಲದಿರಲು ಶಿವನನ್ನು ಬೇಡಿ ಸತ್ಪುತ್ರನನ್ನು ಪಡೆದನು. ಹಲವಾರು ವರ್ಷಕ್ಕೆ ಈತ ಪ್ರಾಯಕ್ಕೆ ಬರುವಾಗ ತಂದೆ ತೀರಿಕೊಂಡ. "ತಂದೆ ಸತ್ತ ಪ್ರತಿಯೊಬ್ಬರೂ ಸಾಯಲೇ ಬೇಕು" ಇದರ ರಹಸ್ಯವನ್ನು ಹಲವರಿಂದ ತಿಳಿದ "ಸಾಯದಿರ ಬೇಕಾದರೆ ಏನು ಮಾಡಬೇಕು?". ಎಂಬುದರ ಬಗ್ಗೆ. ಅದಕ್ಕೆ ಅವರು "ಶಿವನನ್ನು ಪೂಜಿಸಿ ಮೆಚ್ಚಿಸಿದರೆ ಸಾಧ್ಯ" ಎಂದು ಹೇಳಿದರು. ಆತ ಸೋಮನಾಥನ ಪೂಜಿ, ಮೈಮರೆತ. ಪೂಜಾರಿ " ರಾತ್ರಿಯಾಯಿತು ಬಾಗಿಲು ಮುಚ್ಚಬೇಕು ಹೊರಗೆ ಬಾ" ಎಂದ. ಈ ಬಾಗಿಲು ಮುಚ್ಚಿ ತೆರೆಯುವ ಶಿವಾಲಯದಲ್ಲಿದ್ದು ಏನು ಪ್ರಯೋಜನ. ಈ ರಾಜ್ಯ ಸುಖ ಸಂಪತ್ತು ಎಲ್ಲಾ ನಶ್ವರ ಎನ್ನುತ್ತಾ ಚೋಳದೇಶಕ್ಕೆ ಬಂದು ಪ್ರಾಣ ಲಿಂಗಯಾದ. ಒಮ್ಮೆ ಜಂಗಮ ವೇಷದಲ್ಲಿ ಬಂದು ಶಿವನು ಅಷ್ಟವಿಧಾರ್ಚನೆ, ಷೋಡಸೋಪಚಾರ ಗಳಿಂದ ಅರ್ಚಿಸದೆ ಸುಮ್ಮನೆ ಕುಳಿತರೆ ಏನು ಪ್ರಯೋಜನ? ಎಂದ. ಅದಕ್ಕೆ, ಆತನು ತನ್ನ ವಕ್ಷ ಸ್ಥಳವನ್ನು ಭೇದಿಸಿ ತನ್ನ ಪೂಜಾವಿಧಾನದಿಂದ ಶಿವನನ್ನು ತೋರಿದ. ಆತನ ಅಂತರಂಗಕ್ಕೆ ಪೂಜಾ ನಿಷ್ಠೆಗೆ ಮಾರುಹೋದ ಶಿವ ನಿಜರೂಪ ತೋರಿ ಕೈಲಾಸಕ್ಕೆ ಒಯ್ದು ಗಣ ಪದವಿ ನೀಡಿದ.

ಇನ್ನೊಂದು ಕಥೆಯ ಪ್ರಕಾರ ಈತ ಸಾಗರದ ನೀರಿನಿಂದ ಶಿವನಿಗೆ ಅಭಿಷೇಕ ಮಾಡಿ ತನ್ನ ತೂಕದ ಧೂಪವನ್ನು ನಿತ್ಯವೂ ಅರ್ಚಿಸುತ್ತಿದ್ದನು. ಇದರಿಂದ ಕಡುಬಡವನಾದ. ಆತ ಅಡವಿಯಿಂದ ಗುಗ್ಗಳ ಹೊತ್ತು ತರುತ್ತಿರಲು ಗುಡಿಯ ಪೂಜಾರಿ ಈತನನ್ನು ಕಂಡು ಮಚ್ಚರದಿಂದ ಆತ ಊಟ ಮಾಡುತ್ತಿದ್ದ. ನಿರ್ಮಾಲ್ಯ ಪುಷ್ಪವನ್ನು ಸುಟ್ಟು ಹಾಕಿದರೂ ಈತ ಜಗ್ಗಲಿಲ್ಲ. ಒಮ್ಮೆ ಸಾಗರದ ನೀರು ತರುವಾಗ ಕಾಲಿಗೆ ಮುಳ್ಳು ಚುಚ್ಚಿತು. ಆದರೂ ತಂಬಿಗೆಯನ್ನು ಕೆಳಗೆ ಬಿಡಲಿಲ್ಲ. ಶಿವನು ಶಬರ ವೇಷದಿಂದ ಬಂದು ಆತನ ಕಾಲಿನ ಮುಳ್ಳನ್ನು ತೆಗೆದ. ಈತ ಗುಡಿಗೆ ಬಂದು ಗಂಟೆ ಬಾರಿಸುತ್ತಾ ಆಕಾಶ ಮಾರ್ಗವಾಗಿ ಕೈಲಾಸಕ್ಕೆ ಹೋದ.

ಮತ್ತೊಂದು ಕಥೆಯ ಪ್ರಕಾರ ಓಹಿಲಯ್ಯನಿಗೆ ಸೋಮನಾಥ ಹನ್ನೆರೆಡು ವರ್ಷ ತನಗೆ ಗುಗ್ಗಳ ಸೇವೆ ಮಾಡಬೇಕೆಂದು ಲಿಂಗದಲ್ಲೇ ತಿಳಿಸಿದ. ಜನರು ಗುಗ್ಗಳ ತಂದು ಕೊಡಲು ಅದರಿಂದ ಸೋಮನಾಥನಿಗೆ ಸೇವೆ ಮಾಡ ತೊಡಗಿದ. ಆದರೆ ಅದಕ್ಕೆ ಸೋಮನಾಥ ಒಪ್ಪದೆ, ಕಾಲ್ನಡಿಗೆಯಲ್ಲೇ ತಂದು ನೀನು ಅರ್ಚಿಸಬೇಕು ಎಂದು ಅಜ್ಞಾಪಿಸಿದ. ಅದರಂತೆ ಗುಗ್ಗಳ ದ್ವೀಪಕ್ಕೆ ಹೋಗಿ ಗುಗ್ಗಳ ತಂದು ಹನ್ನೆರೆಡು ವರ್ಷಗಳ ಕಾಲ ಬಹಳ ಕಷ್ಟದಿಂದ ಶಿವನಿಗೆ ಅರ್ಪಿಸಿದ. ಕೊನೆಗೆ ಶಿವನ ಅನುಗ್ರಹ ಪಡೆದು ಕೈಲಾಸಕ್ಕೆ ಹೋದ.

### ೪೩. ಕಳಚತ್ತಿಯಾಂಡರು.

ಚೋಳದೇಶದಲ್ಲಿ 'ಕಣಂಜಿ' ಎಂಬ ಪುರ. ಅಲ್ಲಿ ಕಳಚತ್ತಿಯಾಂಡರೆಂಬುವರು ಗುರುಲಿಂಗ ಜಂಗಮರಲ್ಲಿ ಅಪಾರ ಪ್ರೇಮವುಳ್ಳವನಾಗಿದ್ದು ಯಾರಾದರೂ ಅವರ ಬಗ್ಗೆ ಅವಹೇಳನ ಮಾಡಿದರೆ ನಾಲಿಗೆಯನ್ನು ಕತ್ತರಿಸುವ ಗಣಾಚಾರಿಯಾಗಿ ಕೆಲಸ ಮಾಡುತ್ತಿದ್ದ. ಈತ ಪ್ರತಿದಿನ ಐದು ಜನ ಭವಿಗಳನ್ನಾದರೂ ಭಕ್ತರನ್ನಾಗಿ ಪರಿವರ್ತಿಸುತ್ತಿದ್ದ. ಒಂದು ದಿನ ನಾಲ್ವರು ಜನರು ಸಿಕ್ಕಲು ಎಷ್ಟೇ ಹುಡುಕಿದರೂ ಮತ್ತೊಬ್ಬ ಸಿಕ್ಕಲಿಲ್ಲ. ಶಿವನೇ ಭವಿಯ ರೂಪಿನಲ್ಲಿ ಒಂದು ಜಂಗಮರ ನಿಂದೆ ಮಾಡಿದ. ಆಗ ಪ್ರತ್ಯಕ್ಷನಾದ ಕಳಚತ್ತಿಯಾಂಡರು ಸಹಿಸಲಾರದೆ ಆತನ ನಾಲಿಗೆ ಸೀಳಲು ಹೊರಟ. ಆತ ಓಡಿದ. ಹಿಂಬಾಲಿಸಿದ ಶಿವನು ತಾನಾರೆಂಬುದಕ್ಕೆ ತನ್ನ ಹಣೆ ಕಣ್ಣನ್ನು ತೆರೆದು ಕೊಂದ. ಹಾಗಾದರೂ ಬಿಡದೆ ಶಿವ ಶಿವ ಎಂದರೆ ಮಾತ್ರ ಬಿಡುವೆ ಇಲ್ಲದಿದ್ದರೆ ನಾಲಿಗೆ ಕತ್ತರಿಸುವೆ ಎಂದು ಕೋಪದಿಂದ ನುಡಿದ. ಆತನ ಭಕ್ತಿಗೆ ಪ್ರತ್ಯಕ್ಷವಾಗಿ ಆತನನ್ನು ಆಶೀರ್ವದಿಸಿ ಕೈಲಾಸಕ್ಕೆ ಒಯ್ದ.

### ೪೪. ಕಲಿಯನಯನಾರು

ಚೋಳದೇಶದ ತಿರುವತ್ತೂರಿನಲ್ಲಿ (ಕಲಿಯನಾರ್) ಕಲಿಯನಾಯ ನಾರೆಂಬ ಶ್ರೀಮಂತ ಭಕ್ತ. ಪ್ರತಿನಿತ್ಯವೂ ಶಿವಾರಾಧನೆ ಮಾಡುತ್ತಾ, ಪ್ರತಿದಿನ ಒಂದು ಖಂಡುಗ ಎಣ್ಣೆಯನ್ನು ದೀಪಾರಾಧನೆಗೆ ಉಪಯೋಗಿಸುತ್ತಿದ್ದ. ಆತನ ದ್ರವ್ಯ ಕಡಿಮೆ ಆಯಿತು. ಹೀಗೆ ೬೦ ವರ್ಷಗಳು ನಡೆಸಿದ. ಹೆಂಡತಿಯನ್ನಾದರೂ ಮಾರಿ ದೇವಾಲಯದ ದೀಪವನ್ನು ಹಚ್ಚಬೇಕೆಂದು ಸಾರಿದ. ಯಾರೂ ಕೊಂಡುಕೊಳ್ಳಲಿಲ್ಲ. ತನ್ನ ರಕ್ತವನ್ನು ಏಕೆ ಎಣ್ಣೆಯಾಗಿ ಹಾಕಿ ಉರಿಸಬಾರದು ಎಂದು ತನ್ನ ರಕ್ತವನ್ನು ದೀಪಕ್ಕೆ ಹಾಕಿ "ದೇವಾ ಈ ರಕ್ತ ಎಣ್ಣೆಯಾಗಿ ದೀಪ ಉರಿಯಲಿ" ಎಂದು ಬೇಡಿದ. ದೀಪ ಜಾಜ್ವಲ್ಯಮಾನವಾಗಿ ಉರಿಯಿತು. ಆತನ ಭಕ್ತಿಗೆ ಮೆಚ್ಚಿ ಈಶ್ವರ ಪ್ರತ್ಯಕ್ಷವಾಗಿ ಕಲಿಯನಯನಾರರನ್ನು ಕೈಲಾಸಕ್ಕೆ ಕರೆದೊಯ್ದು ಶಿವ ಸಾಯುಜ್ಯ ನೀಡಿದ.

(ಮುಂದುವರಿಯುವುದು)





## ಗೃಹತಪಸ್ವಿನಿ ಶ್ರೀಮತಿ ಗಂಗಮ್ಮ ಹೆಚ್.ಎಂ. ಗಂಗಾಧರಯ್ಯ ನವರು



*ಪ್ರತಿವರ್ಷ ಶ್ರೀಕ್ಷೇತ್ರದಲ್ಲಿ ಆಚರಿಸುವ ಗುರುವಂದನಾ ಮಹೋತ್ಸವದಲ್ಲಿ ನಾಡಿನ ವಿವಿಧ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿದ ಗಣ್ಯರಿಗೆ ಪ್ರಶಸ್ತಿ ನೀಡಿ ಗೌರವಿಸುವ ಸತ್‌ಸಂಪ್ರದಾಯವನ್ನು ಬೆಳಸಿಕೊಂಡು ಬಂದಿದೆ. ಅದರಂತೆ ಈ ವರ್ಷವೂ ಪರಮಪೂಜ್ಯ ಶ್ರೀಶ್ರೀಗಳವರ ೯೩ನೇ ಜನ್ಮ ದಿನಾಚರಣೆಯ ಸಂದರ್ಭದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ ನಾಲ್ಕು ಜನ ಮಹನೀಯರನ್ನು ಶ್ರೀಮಠದ ಭಕ್ತಾದಿಗಳು, ಹಳೆಯ ವಿದ್ಯಾರ್ಥಿಗಳು, ಅಭಿಮಾನಿಗಳು ಅತ್ಯಂತ ಸಂತೋಷ-ಸಡಗರದಿಂದ ಬರಮಾಡಿಕೊಂಡು, ಗೌರವಿಸಿತು. ಈ ನಾಲ್ಕು ಜನರಲ್ಲಿ ಶ್ರೀಮತಿ ಗಂಗಮ್ಮ ಹೆಚ್.ಎಂ. ಗಂಗಾಧರಯ್ಯ ಅವರೂ ಒಬ್ಬರು. ಅವರ ಸಂಕ್ಷಿಪ್ತ ಪರಿಚಯ ಮಾಡಿಕೊಡಲಾಗಿದೆ.*

ಕರ್ನಾಟಕದಲ್ಲಿ ತುಮಕೂರು ಜಿಲ್ಲೆ ಹಲವು ವೈಶಿಷ್ಟ್ಯಗಳಿಗೆ ಹೆಸರಾದುದು. ಕಲೆ, ಸಾಹಿತ್ಯ, ಧರ್ಮ, ಆಧ್ಯಾತ್ಮ ಶಿಕ್ಷಣ ರಂಗಗಳಲ್ಲಿ ಪ್ರಮುಖ ಪಾತ್ರವಾಡುತ್ತ ಬಂದಿದೆ. ಈ ಜಿಲ್ಲೆಯ ಪ್ರಖ್ಯಾತ ಶಿಕ್ಷಣ ಸಂಸ್ಥೆಗಳು ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ಮತ್ತು ಶ್ರೀ ಸಿದ್ದಾರ್ಥ ಶಿಕ್ಷಣ ಸಂಸ್ಥೆಗಳು. ನಾಡಿನುದ್ದಗಲದಲ್ಲಿ ಶಾಲಾ ಕಾಲೇಜುಗಳನ್ನು ತೆರೆದು **ತಮಂಧ ಘನಜ್ಯೋತಿ ಕಿರಿದೆನ್ನಬಹುದೇ** ಎಂಬಂತೆ ಅಕ್ಷರ ಸಂಸ್ಕೃತಿಯ ಸಂವರ್ಧನಾ ಯಜ್ಞದಲ್ಲಿ ಮಗ್ನವಾಗಿವೆ.

ಶ್ರೀ ಸಿದ್ದಾರ್ಥ ಶಿಕ್ಷಣ ಸಂಸ್ಥೆಯ ರೂವಾರಿ ದಿವಂಗತ ಹೆಚ್.ಎಂ. ಗಂಗಾಧರಯ್ಯನವರು. ಶ್ರೀಯುತರ ಸ್ಫೂರ್ತಿ, ಶಕ್ತಿ, ಪ್ರೀತಿಯ ಬತ್ತದ ಬುಗ್ಗೆ ಶ್ರೀಮತಿ ಗಂಗಮ್ಮನವರು. ಪತಿಯ ಬೇಕು ಬೇಡಗಳನ್ನರಿತು ಹೆಜ್ಜೆ ಹಾಕಿದ ಸಾಧ್ವಿ. ಗಂಗಾಧರಯ್ಯನವರ ಸೇವಾ ಪ್ರಣತಿಗೆ ಎಣ್ಣೆಬತ್ತಿಯನ್ನು ಹಾಕುತ್ತ ನಡೆದ ಕಾಯಕಸದ್ಭಾವಿ. ಸ್ವಭಾವದಲ್ಲಿ ಮುಗ್ಧತೆ, ಮಾತಿನಲ್ಲಿ ಮೃದು ಮಧುರ ರುಚಿ, ಹಿತವಾದ ಅದೂ ಮಿತವಾದ ನುಡಿ, ಆಡಂಬರ ಅಲಂಕಾರಗಳಿಂದ ಬಲುದೂರ, ಸಂಸಾರದಲ್ಲಿ ಸವಿಯನ್ನುಣಿಸಿದ ಸದ್ಗೃಹಿಣಿ. ೭೫ ವಸಂತಗಳನ್ನು ಕಂಡಿರುವ ಗೃಹತಪಸ್ವಿನಿ. ಅಪರೂಪದ ವ್ಯಕ್ತಿತ್ವ. ಪ್ರಚಾರ ಪ್ರಿಯರಲ್ಲ. ಅಹಂಕಾರ ಲವಲೇಶವಿಲ್ಲ. ಪ್ರಸಿದ್ಧಿಗೆ ಹಾತೊರೆದು ಮಹಿಳಾ ಕ್ಲಬ್ಬುಗಳಿಗೆ ಹಾಜರಿ ಹಾಕಿದವರಲ್ಲ. ಮನೆಯನ್ನು ಪ್ರೀತಿ ವಿಶ್ವಾಸ ಎಚ್ಚರಗಳಿಂದ ಕಟ್ಟಿದ ತುಂಬುಜೀವಿ. ಕೈಹಿಡಿದ ಪುರುಷನನ್ನು, ಹೆತ್ತ ಮಕ್ಕಳನ್ನು, ಬಳಿಗೆ ಬಂದ ಬಂಧುಗಳನ್ನು, ಸಹಾಯಕ್ಕಾಗಿ ಕೈ ಚಾಚಿದವರನ್ನು ಆತ್ಮೀಯವಾಗಿ ನಡೆಸಿಕೊಂಡ ಹಳ್ಳಿಯ ಬೆಳ್ಳಿದೀಪ. ಮನೆ ಬೆಳಗಿದ ಒಳ್ಳೆಯ ದೀಪ.

ಶ್ರೀಮತಿ ಗಂಗಮ್ಮನವರು ಹುಟ್ಟಿದ್ದು ೧೯೨೫ರಲ್ಲಿ. ಇಂದಿನ ಸಿದ್ದಾರ್ಥ ನಗರವಾದ ಅಂದಿನ ಗೊಲ್ಲಹಳ್ಳಿಯಲ್ಲಿ. ಶ್ರೀ ಗವಿಯಪ್ಪನವರ ಅವಿಭಕ್ತ ಕುಟುಂಬದಲ್ಲಿ ಶ್ರೀ ಚಿಕ್ಕಣ್ಣ ಗವಿಯಪ್ಪನವರ ಸೋದರ. ಆ ಚಿಕ್ಕಣ್ಣನವರ ಹಿರಿಯ ಮಗಳು ಶ್ರೀಮತಿ ಗಂಗಮ್ಮ ಹೆತ್ತ ತಾಯಿ ಶ್ರೀಮತಿ ರುದ್ರಮ್ಮ ಸ್ವಾತಂತ್ರ್ಯಪೂರ್ವದ ಜೀವನ. ಹಿಂದುಳಿದ ಬಂಧುಗಳಿಗೆ ವಿದ್ಯಾಭ್ಯಾಸ ಮುಗಿಲ ಮಲ್ಲಿಗೆಯಾಗಿದ್ದ ಕಾಲ. ಕೆಲ ಮಹಿಳೆ ಯರಿಗಂತೂ ಅಕ್ಷರ ಬೆಳಕು ನಿಷಿದ್ಧವಾಗಿದ್ದ ದಿನಗಳು. ಶ್ರೀಮತಿ ಗಂಗಮ್ಮನವರಿಗೆ ಒಬ್ಬ ತಮ್ಮ ಮೂವರು ತಂಗಿಯರು. ಹಾಸಿ ಹೊದ್ದದ್ದು ಕಷ್ಟ ಸಂಕಷ್ಟಗಳನ್ನು, ಕಲಿತದ್ದು ಪ್ರಾಥಮಿಕ ಶಾಲೆಗಷ್ಟೆ ಮುಕ್ತಾಯ. ಶ್ರೀಮತಿಯವರ ತಮ್ಮ ಶ್ರೀ ಜಿ.ಸಿ. ಭೈರಯ್ಯನವರು ತುಂಬು ವಿದ್ಯಾವಂತರಾದರು. ಸಸ್ಯಶಾಸ್ತ್ರದಲ್ಲಿ ಎಂ.ಎಸ್ಸಿ ಪದವಿ ಪಡೆದು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು. ಶ್ರೀ ಭೈರಯ್ಯನವರ ವ್ಯಾಸಂಗ ಮುಂದುವರಿಯಲು ಸಹಾಯಕರಾಗಿ ಉತ್ತೇಜನ ನೀಡಿ, ಹಿಂದುಳಿದವರ ಕರುಣಾಮಯಿ ಬಂಧುವಾಗಿ ಕೈಹಿಡಿದು ನಡೆಸಿದವರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳೆಂದು ಇಂದೂ ಸ್ಮರಿಸುತ್ತಾರೆ

ಶ್ರೀಮತಿ ಗಂಗಮ್ಮನವರು ಹಾಗೂ ಅವರ ಕುಟುಂಬ ವರ್ಗದ ಎಲ್ಲ ಬಂಧುಗಳು. ಉಪಕಾರ ಸ್ಮರಣೆಯ ಸುಸಂಸ್ಕೃತಿ ಈ ಮನೆತನದ ಒಂದು ಸಲ್ಲಕ್ಷಣ.

ಶ್ರೀಮತಿ ಗಂಗಮ್ಮನವರು ತಮ್ಮ ೧೪-೧೫ನೇ ವಯಸ್ಸಿನಲ್ಲಿಯೇ ವಿವಾಹ ಯೋಗವನ್ನು ಕಂಡ ಅದೃಷ್ಟವಂತರು. ಕುಣಿಗಲ್ ತಾಲ್ಲೂಕಿನ ಅಮೃತೂರಿನ ಶಾಲಾಮಾಸ್ತರರಾಗಿದ್ದ ದಿವಂಗತ ಮರಿಯಪ್ಪನವರ ಪುತ್ರ ಶ್ರೀ ಹೆಚ್.ಎಂ. ಗಂಗಾಧರಯ್ಯನವರೊಡನೆ ೧೯೩೭ರಲ್ಲಿ ಲಗ್ನವಾದರು. ಶ್ರೀ ಗಂಗಾಧರಯ್ಯನವರು ಆಗ ತೀರ್ಥಹಳ್ಳಿ ಪ್ರೌಢಶಾಲೆಯಲ್ಲಿ ಚಿತ್ರಕಲಾ ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿದ್ದರು. ಸಮಾಜ ಸೇವೆಯ ಕನಸು ಕಾಣುತ್ತಿದ್ದ ಶ್ರೀಯುತರು ಮಹಾನುಭಾವರ ಜೀವನಾದರ್ಶಗಳ ಬೆಳಕಿನಲ್ಲಿ ಮುನ್ನಡೆಯಲಾರಂಭಿಸಿದ್ದರು. ಬುದ್ಧ, ಬಸವ, ಗಾಂಧಿ, ಅಂಬೇಡ್ಕರರ ತತ್ವಾದರ್ಶಗಳಿಗೆ ಮಾರುಹೋಗಿದ್ದರು. ದೊಡ್ಡ ಬದುಕಿನ ದೊಡ್ಡ ದಾರಿಯ ಪಥಿಕರಾಗಿದ್ದ ಪತಿಯ ಚಿಂತನ ಮಂಥನಗಳನ್ನು ಅರಿಯುವಷ್ಟು ಪ್ರಬುದ್ಧರಾಗಿರಲಿಲ್ಲ ಶ್ರೀಮತಿ ಗಂಗಮ್ಮನವರು. ಆದರೆ ತನ್ನನ್ನು ಕೈಹಿಡಿದವರು ಸಣ್ಣವರಲ್ಲ, ಸಣ್ಣ ದೃಷ್ಟಿಯವರಲ್ಲ, ಸ್ವಾರ್ಥ ಪರರಲ್ಲ ಎಂಬುದನ್ನರಿಯಲು ಶ್ರೀಮತಿಯವರಿಗೆ ಬಹಳ ದಿನಗಳು ಬೇಕಾಗಲಿಲ್ಲ. ಶ್ರೀ ಗಂಗಾಧರಯ್ಯನವರ ಜೀವನ ವಿಧಾನಕ್ಕೆ ಹೊಂದಿಕೊಂಡರು, ಒಗ್ಗಿ ಹೋದರು. ಅವರ ಕೈಯ್ಯಲ್ಲಿ ಜೀವನ ಸಂಗೀತ ನುಡಿವ ವೀಣೆಯಾದರು.

ಪತಿ ಸಮಾಜ ಸೇವೆ, ಹರಿಜನೋದ್ಧಾರ, ಗ್ರಾಮಾಭಿವೃದ್ಧಿ, ಶಿಕ್ಷಣ ಪ್ರಸಾರ, ರಾಜಕೀಯಗಳಲ್ಲಿ ನಿರತರಾದಾಗ ಕೌಟುಂಬಿಕ ಎಲ್ಲ ಹೊಣೆಹೊತ್ತು ಮಕ್ಕಳು ಮರಿಗಳನ್ನು ಸನ್ಮಾರ್ಗದಲ್ಲಿ ನಡೆಯಿಸಿದ ತ್ಯಾಗಮಯಿ ಶ್ರೀಮತಿ ಗಂಗಮ್ಮನವರು. ಶ್ರೀ ಗಂಗಾಧರಯ್ಯನವರು ವಿಧಾನ ಪರಿಷತ್ ಸದಸ್ಯರಾಗಿದ್ದ ದಿನಗಳು. ಕುಟುಂಬ ಕಷ್ಟ ಸಂಕಷ್ಟಗಳನ್ನೆದುರಿಸಿದ ಕಾಲ. ಬಡತನವನ್ನು ಭಾಗ್ಯವೆಂದಪ್ಪಿಕೊಂಡು ಜೀವನಯಾಪನೆ ಮಾಡಿದ ಪರಿಸ್ಥಿತಿ. ಕುಡುಗೋಲು ಹಿಡಿದು ಕೃಷಿಯಲ್ಲಿ ಶ್ರೀಮತಿಯವರು ತೊಡಗಿದರು. ಕಳೆ ಕಿತ್ತರು, ನಾಟಿ ಹಾಕಿದರು, ಕಣ ಸಾರಿಸಿದರು, ಮೊರ ಹಿಡಿದು ಕಾಳು ಕೇರಿದರು. ಜರಡಿಯಾಡಿಸಿದರು, ಬೀಸುವ ಕಲ್ಲಿಡಿದು ಬೀಸಿದರು, ಕಸಬರಿಗೆ ಕಟ್ಟಿ, ಕುಟ್ಟಿ ಕೈಹಿಡಿದು ದನದ ಕೊಟ್ಟಿಗೆ ಸ್ವಚ್ಛಮಾಡಿದರು. ಹೊತ್ತಿಗೆ ಸರಿಯಾಗಿ ಹಿಟ್ಟು ತಿರುವಿ ಮಕ್ಕಳಿಗೆ, ಬಂಧು ಬಳಗಕ್ಕೆ ನೀಡಿ ಸಂಸಾರ ರಥ ನಡೆಸಿದರು. ಕುಗ್ಗಲಿಲ್ಲ, ಕುಸಿಯಲಿಲ್ಲ ಖುಷಿಯಿಂದಲೇ ಎಲ್ಲ ಎದುರಿಸಿದರು.

ಶ್ರೀಮತಿಯವರು ಹೆತ್ತಿದ್ದು ಐದು ಮಕ್ಕಳನ್ನು. ಎರಡು ಕೀರ್ತಿಗೆ, ಮೂರು ಆರತಿಗೆ. ಡಾ. ಜಿ. ಶಿವಪ್ರಸಾದ್ ಹಿರಿಯ ಮಗ, ನೇತ್ರ ತಜ್ಞರು, ಶ್ರೀ ಸಿದ್ಧಾರ್ಥ ವೈದ್ಯಕೀಯ ವಿದ್ಯಾಲಯದ ಮತ್ತು ಆಸ್ಪತ್ರೆಯ ನಿರ್ದೇಶಕರು. ಅಲ್ಲದೆ ಶ್ರೀ ಸಿದ್ಧಾರ್ಥ ಶಿಕ್ಷಣ ಸಂಸ್ಥೆಯ ಕಾರ್ಯದರ್ಶಿಗಳು. ತಂದೆಯ ವಿದ್ಯೆ, ತಾಯಿಯ ಬುದ್ಧಿಯ ಸಮರಸವನ್ನು ಮೈಗೂಡಿಸಿಕೊಂಡಿರುವ ಜೀವನೋತ್ಸಾಹಿಗಳು. ಶ್ರೀ ಸಿದ್ಧಗಂಗಾ ಶ್ರೀಗಳವರಲ್ಲಿ ಅನನ್ಯಭಕ್ತಿ ಶ್ರದ್ಧೆಗಳನ್ನಿಟ್ಟುಕೊಂಡಿರುವ ಗುರುಭಕ್ತಿ ಸಂಪನ್ನರು.

ಸಾಧ್ವಿ ಗಂಗಮ್ಮನವರ ಇನ್ನೊಬ್ಬ ಪುತ್ರರತ್ನ ಡಾ. ಜಿ. ಪರಮೇಶ್ವರ್, ರಾಜ್ಯದ ಇಂದಿನ ಉನ್ನತ ಶಿಕ್ಷಣ ಸಚಿವರಾಗಿರುವ ಜನಾನುರಾಗಿಗಳು, ಸೌಜನ್ಯಶೀಲರು, ವಿಚಾರವಂತರು, ಕೃಷಿ ತಜ್ಞರು, ವ್ಯವಸಾಯ ವಿದ್ಯೆಯಲ್ಲಿ ಡಾಕ್ಟರೇಟ್ ಪಡೆದಿರುವ ಸುಸಂಸ್ಕೃತರು. ತಂದೆ ತಾಯಿಗಳ ಮುದ್ದಿನ ಮಗ. ಸಮಾಜದ ಆದ್ಯತೆಯ ಸಂಪತ್ತು. ಪರಮಪೂಜ್ಯ ಶ್ರೀ ಶ್ರೀಗಳವರಲ್ಲಿ ಅಖಂಡ, ನಿಷ್ಕಲ್ಮಷ ನಿಷ್ಠೆಯಿರಿಸಿ ಕೊಂಡಿರುವ ಗುರು ಪ್ರೇಮಿಗಳು.

ಶ್ರೀ ನಾಗರತ್ನಮ್ಮ ಶ್ರೀಮತಿ ಸೌಭಾಗ್ಯವತಿ, ಶ್ರೀಮತಿ ಕಮಲಮ್ಮನವರುಗಳು ತಾಯಿ ಗಂಗಮ್ಮನವರ ಭಾವ ಬುದ್ಧಿಗಳನ್ನು ಹೊತ್ತು ಬಂದ ಹೆಮ್ಮಕ್ಕಳು. ವಿವಾಹಿತರಾಗಿ ಕೈಹಿಡಿದ ಪತಿ ಪುರುಷರ ಬಾಳು ಬೆಳಗುತ್ತಿರುವ ಗೃಹ ದೀಪಗಳು. ಹುಟ್ಟಿದ ಮನೆಗೂ, ಕೊಟ್ಟ ಮನೆಗೂ ಹೆಸರು ತಂದಿರುವ ಉಭಯನಂದಾ ದೀಪಗಳು.

ದಿವಂಗತ ಹೆಚ್.ಎಂ. ಗಂಗಾಧರಯ್ಯನವರದು ಸಾಹಸದ ಬದುಕು. ಅವರು ಕೈ ಹಿಡಿದ ಶ್ರೀಮತಿ ಗಂಗಮ್ಮನವರದು ಸಂಯಮದ, ಸಂತೃಪ್ತಿಯ ಬದುಕು. ಸುಖ ದುಃಖಗಳನ್ನು ಸಮಭಾವದಿಂದ ಅನುಭವಿಸಿದ ತಪಸ್ವಿನಿಯ ಬದುಕು. ನೂರಾರು ಶಿಕ್ಷಣ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದರು ಶ್ರೀ ಗಂಗಾಧರಯ್ಯನವರು. ಶಿಕ್ಷಣ ಭೀಷ್ಮರೆನಿಸಿಕೊಂಡರು. ಶ್ರೀಮತಿ ಗಂಗಮ್ಮನವರು ಗಂಗಾಧರಯ್ಯನವರ ಮತ್ತೊಂದು ಬದುಕನ್ನು, ಕೌಟುಂಬಿಕ ಬದುಕನ್ನು ಸುಂದರವಾಗಿ ಕಡೆದು ನಿಲ್ಲಿಸಿದ ಕೀರ್ತಿಗೆ ಭಾಜನರಾದರು. ಪತಿ ಮಾರುಗೆದ್ದರು, ಸತಿಮನೆಗೆದ್ದರು. ಸತಿ ಪತಿಗಳು ಸೇರಿ ಮನೆಮಾರುಗೆದ್ದು, ಇಲ್ಲಿ ಅಲ್ಲಿ ಸಲ್ಲುವ ಬದುಕನ್ನು ತೋರಿಸಿದ ಕೀರ್ತಿವಂತರಾದರು ಧನ್ಯ ಶ್ರೀ ಗಂಗಾಧರಯ್ಯ, ಶ್ರೀಮತಿ ಗಂಗಮ್ಮನವರ ಜೀವನ. ಗುರುಲಿಂಗ ಜಂಗಮ ಸೇವಾಶೀಲರು ಶ್ರೀಮತಿಯವರು.

ಶ್ರೀ ಸಿದ್ಧಗಂಗಾ ಮಠ ಎಲ್ಲೆಲ್ಲೂ, ಎತ್ತೆತ್ತಲೂ, ಶುಭವನ್ನೇ, ಮಂಗಳವನ್ನೇ ಕಾಣುವ ದೃಷ್ಟಿಯುಳ್ಳದ್ದು, ಕಂಡದ್ದನ್ನು ಗೌರವಿಸುವ, ಸತ್ಕರಿಸುವ ಸಂಪ್ರದಾಯ ಅದಕ್ಕೆ. ಆ ದೃಷ್ಟಿಗೆ ಪುರುಷ ಸ್ತ್ರೀ ಎಂಬ ಭೇದವಿಲ್ಲ. ಜಾತಿ ವಿಜಾತಿಯೆಂಬ ಭಿನ್ನ ಭಾವವಿಲ್ಲ. ನಗರ ಹಳ್ಳಿಗರೆಂಬ ತಾರತಮ್ಯ ಅದಕ್ಕೆ ಸಲ್ಲ. ಅಧಿಕಾರ, ಐಶ್ವರ್ಯವಂತನೆಂಬ ಎಣಿಕೆ ಇಲ್ಲ. ಒಟ್ಟಿನಲ್ಲಿ ಭೇದ ಸಂಸ್ಕೃತಿ ಅದರದ್ದಲ್ಲ. ಶ್ರೀಮತಿ ಗಂಗಮ್ಮನವರು ದಿವಂಗತ ಹೆಚ್.ಎಂ. ಗಂಗಾಧರಯ್ಯನವರ ಧರ್ಮಪತ್ನಿಯಾಗಿ ಅವರ ಜೀವನದುದ್ದಕ್ಕೂ ಅನುಕೂಲಕರವಾದ ಹೆಜ್ಜೆಹಾಕಿದ ಸದ್ಗೃಹಿಣಿಯೆಂಬುದನ್ನು ಮನಗಂಡು 'ಗೃಹತಪಸ್ವಿನಿ' ಎಂದು ಸನ್ಮಾನಿಸಿದೆ. 





ನಿಮಗಿದು ತಿಳಿದಿರಲಿ

# ಹೆಸರುಕಾಳು



ಆಯುರ್ವೇದಾಚಾರ್ಯ, ಆಸ್ಥಾನ ವಿದ್ವಾನ್. ಆಯುರ್ವೇದರತ್ನ
**ಪಂಡಿತ ಶ್ರೀ ಶಿವಕುಮಾರ ಸ್ವಾಮಿಗಳು**

ಹೆಸರುಕಾಳು ಶೀತಲ ಮತ್ತು ಒಗರು, ಸಿಹಿ ರಸಗಳಿಂದ ಕೂಡಿದೆ. ಬಹಳ ಹಗುರಾದುದು, ಪಿತ್ತವಿಕಾರ ಮತ್ತು ರಕ್ತವಿಕಾರವನ್ನು ಶಾಂತಗೊಳಿಸುವುದು. ಇದು ಮಲಬದ್ಧತೆಯನ್ನುಂಟು ಮಾಡುವುದಿಲ್ಲ. ಇದರಲ್ಲಿ ಕಪ್ಪು, ಕೆಂಪು, ಬಿಳುಪು, ಹಸಿರು ಬಣ್ಣಗಳ ನಾಲ್ಕು ಜಾತಿಗಳಿವೆ. ಗುಣದಲ್ಲಿ ಎಲ್ಲವೂ ಒಂದೇ ವಿಧ; ಆದರೆ ಹೆಸರು ಜಾತಿಯದೇ ಸರ್ವೋತ್ತಮವೆಂದು ಸುಶ್ರುತ ಮತ್ತು ಚರಕಮುನಿಗಳ ಮತವಾಗಿದೆ. ಭಾವಪ್ರಕಾಶಕಾರನು ಕಪ್ಪು, ಕೆಂಪು ಹೆಸರುಗಳೆರಡನ್ನೂ ಉತ್ತಮವೆಂದು ಹೇಳಿರುತ್ತಾನೆ. ಹೆಸರಿನಲ್ಲಿ ಅತಿಸಾರವನ್ನು ನಿಲ್ಲಿಸತಕ್ಕ ಗುಣವು ಹೆಚ್ಚಾಗಿದೆ. ಕಣ್ಣಿನ ರೋಗದವರಿಗೆ ವಿಶೇಷ ಲಾಭದಾಯಕವಾಗಿದೆ. ವ್ರಣ, ಗಂಟಲಿನ ವಿಕಾರ, ವಾತರಕ್ತ, ಕ್ರಿಮಿರೋಗ, ಮಂದಾಗ್ನಿ, ಜ್ವರ, ಮೂತ್ರ ವಿಕಾರಗಳನ್ನು ಶಾಂತಗೊಳಿಸುತ್ತದೆ. ಕಾಡು ಹೆಸರು ಉಷ್ಣವೀರ್ಯವುಳ್ಳುದು, ಕಫ, ಪಿತ್ತ, ಕ್ಷಯ, ವಾಂತಿ, ಗುಲ್ಮ ಮೂಲವ್ಯಾಧಿಗಳಿಗೆ ಗುಣಕಾರಿಯಾಗಿದೆ.

ಉತ್ತರ ಭಾರತದಲ್ಲಿ ಹೆಸರುಕಾಳಿನ ಪ್ರಚಾರವು ವಿಶೇಷವಾಗಿದೆ. ಇದರ ಬೇಳೆಯು ಸರ್ವಸಾಮಾನ್ಯವಾಗಿ ಅಲ್ಲಿನ ಜನರಿಗೆ ನಿತ್ಯಾಹಾರವಾಗಿದೆ. ಹೆಸರುಕಾಳು ಜಠರಾಗ್ನಿಯನ್ನು ಹೆಚ್ಚಿಸಿ ಬಲ ವೀರ್ಯಗಳನ್ನು ಬಲಪಡಿಸುತ್ತದೆ. ಮತ್ತು ಕಣ್ಣುಗಳಿಗೆ ತಂಪನ್ನುಂಟುಮಾಡುವುದಲ್ಲದೆ ಪಿತ್ತವಿಕಾರದ ರೋಗಗಳನ್ನು ಶಮನಗೊಳಿಸುತ್ತದೆ. ಇದು ಅತಿಸಾರ, ಹೊಟ್ಟೆಯ ಉರಿ ಮತ್ತು ರಕ್ತಪಿತ್ತದ ರೋಗಿಗಳಿಗೆ ಹಿತಕರವಾಗಿದೆ. ಇದರ ಕಟ್ಟು ಕಫ, ಪಿತ್ತಗಳ ತೊಂದರೆ, ಎದೆಯ ಉರಿ, ಸಂತಾಪ, ವ್ರಣ, ಕಿವಿ ಮತ್ತು ಕಣ್ಣಿನ ವ್ಯಾಧಿ, ಜ್ವರ, ದಮ್ಮು ಪ್ರಮೇಹ, ವಿಷವಿಕಾರ, ಕ್ಷಯ, ಕುಷ್ಠ, ಮೂಲವ್ಯಾಧಿ, ಪಾಂಡುರೋಗ, ಇವುಗಳನ್ನೆಲ್ಲಾ ಶಾಂತಗೊಳಿಸುತ್ತದೆ. ಹೆಸರುಕಾಳು ಅಥವಾ ಬೇಳೆಯನ್ನು ದಕ್ಷಿಣ ದೇಶದಲ್ಲೆಲ್ಲಾ ಸಾರು, ಪಲ್ಯ ಮತ್ತು ಕೋಸಂಬರಿ ಅಥವಾ ಉಸಲಿಗಳಿಗೆ ಮಾತ್ರ ಉಪಯೋಗಿಸುವ ವಾಡಿಕೆಯೇ ಹೆಚ್ಚಾಗಿದೆ. ಆದರೆ ಉತ್ತರ ಭಾರತದಲ್ಲಿ ಇದನ್ನು ಮಿಠಾಯಿಗಳಿಗೂ ಪಕ್ವಾನ್ನಗಳಿಗೂ ವಿಶೇಷವಾಗಿ ಉಪಯೋಗಿಸುತ್ತಾರೆ. ಇದರಲ್ಲೆಲ್ಲಾ 'ಮುದ್ಗಲ್' ಎಂಬ ಮಿಠಾಯಿಯು ಅತ್ಯಂತ ರುಚಿಕರವೂ ಬಲಕರವೂ ಆಗಿದೆ. ಉತ್ತರ ಕರ್ನಾಟಕದಲ್ಲಿ ಇದನ್ನು ಲಡ್ಡುಗಳಿಗೆ ಉಪಯೋಗಿಸುತ್ತಾರೆ.

- ❑ ಅಕ್ಕಿಯನ್ನು ಮತ್ತು ಹೆಸರುಕಾಳನ್ನು ಸಮಭಾಗವಾಗಿ ಸೇರಿಸಿ ಮಾಡಿರುವ ಗಂಜಿಯು ಜ್ವರ, ಪಿತ್ತವಿಕಾರ ಮತ್ತು ಎದೆಯ ಉರಿಗೆ ಬಹಳ ಹಿತಕರವಾಗಿದೆ.
- ❑ ಹುರಿದ ಹೆಸರುಕಾಳು ಮತ್ತು ಹುರಿದ ಅಕ್ಕಿ ಇವೆರಡನ್ನೂ ಸಮವಾಗಿ ತೆಗೆದುಕೊಂಡು ಕಷಾಯವನ್ನು ಮಾಡಿ ಕಿವಿಚಿ ಶೋಧಿಸಿಕೊಂಡು ಆರಿದ ನಂತರ ಅರ್ಧ ತೊಲ ಜೇನುತುಪ್ಪ ಮತ್ತು ಕಾಲು ತೊಲ ಸಕ್ಕರೆಯನ್ನು ಕೂಡಿಸಿ ಕುಡಿಯುವುದರಿಂದ ಬಾಯಾರಿಕೆ, ಹೊಟ್ಟೆಯ ಉರಿ, ಭೇದಿ ಇವುಗಳು ಶಾಂತವಾಗುತ್ತವೆ.
- ❑ ಐದುತೊಲ ಹುರಿದ ಹೆಸರುಕಾಳನ್ನು ಒಂದುಸೇರು ನೀರಿನಲ್ಲಿ ಹಾಕಿ ಕುದಿಸಿ ಒಂದು ಚಟಾಕಿಗೆ ಕಷಾಯವನ್ನಿಳಿಸಿಕೊಂಡು ಅದರಲ್ಲಿ ಒಂದು ತೊಲ ಬತ್ತದ ಅರಳಿನ ಪುಡಿ ಮತ್ತು ಅರ್ಧ ತೊಲ ಜೇನುತುಪ್ಪವನ್ನು ಕೂಡಿಸಿ ಕುಡಿಯುವುದರಿಂದ ವಾಂತಿ, ಅತಿಸಾರ, ಜ್ವರ, ಬಾಯಾರಿಕೆ, ಭ್ರಮೆ ಇವುಗಳು ಶಾಂತವಾಗುವುವು.
- ❑ ಜ್ವರ ಮತ್ತು ಭೇದಿಯು ಕೂಡಿಕೊಂಡಿದ್ದರೆ ೨ ತೊಲ ಹೆಸರುಬೇಳೆ, ೨ ತೊಲ ಬತ್ತದ ಅರಳು, ೧ ತೊಲ ಕೊತ್ತುಂಬರಿ ಬೀಜ ಮತ್ತು ಶುಂಠಿ, ಮೆಣಸು, ಹಿಪ್ಪಲಿ, ಜೀರಿಗೆ ಇವುಗಳ ಕಾಲು ಕಾಲು ತೊಲ ಪುಡಿ,

ಇವುಗಳನ್ನೆಲ್ಲಾ ಒಂದು ಸೇರು ನೀರಿನಲ್ಲಿ ಹಾಕಿ ಕುದಿಸಿ ಅರ್ಧ ಪಾವಿಗೆ ಕಷಾಯವನ್ನಿಳಿಸಿಕೊಂಡು ಸ್ವಲ್ಪ ಸೈಂಧವ ಲವಣದ ಪುಡಿಯನ್ನೂ ಹಾಕಿ ಕುಡಿಯಬೇಕು. ಇದರಿಂದ ಜ್ವರ, ಭೇದಿಗಳು ಹಿಮ್ಮೆಟ್ಟುವುದಲ್ಲದೆ ಬಾಯಾರಿಕೆಯೂ ನಿಲ್ಲುವುದು.

- ಹೆಸರುಬೇಳೆ ೨ ತೊಲ, ಉದ್ದಿನಬೇಳೆ ೧ ತೊಲ, ನಸುಗುನ್ನಿ ಬೀಜದ ಪುಡಿ ೧ ತೊಲ, ಇವುಗಳನ್ನು ರಾತ್ರಿಯಲ್ಲಿ ನೀರಿನಲ್ಲಿ ನೆನೆಹಾಕಿದ್ದು ಪ್ರಾತಃಕಾಲದಲ್ಲಿ ಈ ಮೂರನ್ನೂ ನುಣ್ಣಗೆ ಅರೆಯಬೇಕು. ಅನಂತರ ಅದನ್ನು ತುಪ್ಪದಲ್ಲಿ ಕೆಂಪಾಗುವಂತೆ ಹುರಿಯಬೇಕು. ಈ ಹುರಿದ ಹಿಟ್ಟನ್ನು ಕುದಿಯುತ್ತಿರುವ ಹಾಲಿನಲ್ಲಿ ಹಾಕಿ ತಕ್ಕಷ್ಟು ಸಕ್ಕರೆಯನ್ನೂ ಹಾಕಿ ಖೀರನ್ನು ಮಾಡಿ ಪ್ರಾತಃಕಾಲದಲ್ಲಿಯೇ ಕುಡಿಯುವುದರಿಂದ ಬಲ, ವೀರ್ಯ, ವರ್ಣಗಳು ವೃದ್ಧಿಯಾಗುತ್ತವೆ.

- ಹೆಸರನ್ನು ಕಪ್ಪಾಗುವವರೆಗೂ ಹುರಿದು ಹೊತ್ತಿಸಿದ ನಂತರ ಅದನ್ನು ಅರೆದು ಕೈಕಾಲುಗಳಿಗೆ ತಿಕ್ಕುವುದರಿಂದ ಹೆಚ್ಚಾಗಿ ಬೆವರು ಬರುತ್ತಿದ್ದರೆ ಅದು ನಿಲ್ಲುತ್ತದೆ. ಹೆಸರಿನ ಹಿಟ್ಟನ್ನು ಸ್ನಾನದ ಸಮಯದಲ್ಲಿ ಸಾಬೂನಿಗೆ ಬದಲಾಗಿ ಉಪಯೋಗಿಸುವುದರಿಂದ ಚರ್ಮವು ಮೃದುವಾಗುತ್ತದಲ್ಲದೆ ವರ್ಣವೂ ಸ್ವಚ್ಛವಾಗುತ್ತದೆ. ಯಾವಾಗಲೂ ಈ ಹಿಟ್ಟನ್ನು ಉಪಯೋಗಿಸುವುದರಿಂದ ಶರೀರದ ಮೇಲಿನ ಎಲ್ಲಾ ವಿಧ ಕಲೆಗಳೂ ಕ್ರಮದಿಂದ ನಾಶವಾಗುತ್ತವೆ. ಈ ಹಿಟ್ಟನ್ನು ಸ್ನಾನದ ಕಾಲದಲ್ಲಿ ಹಚ್ಚಿಕೊಳ್ಳುವ ರೂಢಿಯು ನಮ್ಮ ಭರತಖಂಡದಲ್ಲಿ ವಿಶೇಷವಾಗಿತ್ತು. ಸಾಬೂನಿನ ಜನ್ಮವಾದಂದಿನಿಂದ ಆ ಗುಣಕರವಾದ ನಮ್ಮ ಹಿಟ್ಟಿನ ಪದ್ಧತಿಯು ಕಡಿಮೆಯಾಗುತ್ತ ಬಂದಿತು. ತೊಗರಿ, ಹೆಸರು ಮುಂತಾದ ಹಿಟ್ಟುಗಳ ಪ್ರಚಾರವು ಇರುವವರೆಗೂ ನಮ್ಮ ದೇಶದವರಿಗೆ ಚರ್ಮರೋಗಗಳು ವಿಶೇಷವಾಗಿ ಬರುತ್ತಿರಲಿಲ್ಲ. ಆ ರೂಢಿಯು ತಪ್ಪಿದಂದಿನಿಂದ ಚರ್ಮರೋಗದ ವಿಶೇಷ ಚಿಕಿತ್ಸೆಯು ಮತ್ತು ಈ ರೋಗದ ನಿವಾರಣೆಗಾಗಿ ನೂರಾರು ಆಯಿಂಟುಮೆಂಟುಗಳೂ ಜನಿಸಬೇಕಾಗಿ ಬಂದಿತು! ನಮ್ಮ ಧಾನ್ಯಗಳ ಚೂರ್ಣಗಳಲ್ಲಿ ವರ್ಣಕಾರಕ ಮತ್ತು ನಿರ್ಮಲಕಾರಕ ಗುಣವು ವಿಶೇಷವಾಗಿರುವುದರಿಂದಲೇ ವೈದ್ಯಶಾಸ್ತ್ರ ಪ್ರವರ್ತಕರು ಈ ಹಿಟ್ಟುಗಳ ಸಂಯೋಗ ಮತ್ತು ಒಂದೊಂದರ ಪ್ರಯೋಗಗಳನ್ನು ನೂರಾರು ವಿಧಗಳಿಂದ ಬರೆದಿರುತ್ತಾರೆ. ಈ ಪದ್ಧತಿಯನ್ನೇ "ಉದ್ವರ್ತನ" ಎಂದು ಹೇಳಿರುತ್ತಾರೆ.

ಹೆಸರುಹಿಟ್ಟು ಅರ್ಧಸೇರು, ಕಚೋರ ೩ ತೊಲ, ಕರ್ಪೂರ ೧ ತೊಲ, ಶ್ರೀಗಂಧದ ಸೂಕ್ಷ್ಮವಾದ ಚೂರ್ಣ ೩ ತೊಲ, ಸೀಗೆಪುಡಿ ೫ ತೊಲ, ಕಸ್ತೂರಿ ಅರಿಶಿನ ೩ ತೊಲ, ಇವುಗಳನ್ನು ಕುಟ್ಟಿ ಶೋಧಿಸಿ ಸಾಬೂನಿನ ಸ್ಥಾನದಲ್ಲಿ ಇದನ್ನು ಇಟ್ಟುಬಿಡಿ. ಇದು ನಿಮ್ಮ ಖರ್ಚಿಲ್ಲದ "ಬಾತ್ ಪೌಡರ್". ಸಾಬೂನಿಗೆ ಹಾಕುವ ಹಣವನ್ನು ಉಳಿಸಿ, ಅದಕ್ಕಿಂತಲೂ ಹೆಚ್ಚಿನ ಗುಣವನ್ನು ಕೊಟ್ಟು, ನಿಮಗೆ ಮತ್ತು ನಿಮ್ಮ ಕುಟುಂಬದ ಜನಗಳಿಗೆ ನೆಮ್ಮದಿಯನ್ನುಂಟುಮಾಡುತ್ತದೆ. ❒

## ಮಳೆ ಸುರಿಸುವ ಸೂಕ್ಷ್ಮ ಜೀವಿ

ಸೂಕ್ಷ್ಮ ಜೀವಿಗಳು ಮೋಡಗಳನ್ನು ಏರಿ ಪ್ರಯಾಣ ಮಾಡುವರೆಂದು ಬ್ರಿಟಿಷ್ ವಿಜ್ಞಾನಿಗಳು ನಂಬಿದ್ದಾರೆ. ಪಾಚಿಯ ಬೀಜಗಳು, ದಂಡಾಣುಗಳು ಮತ್ತಿತರ ಸೂಕ್ಷ್ಮ ಜೀವಿಗಳು ನೆಲದಿಂದ ಮೇಲೇರಿ ಮೋಡಗಳಲ್ಲಿ ಸೇರಿ ಅವುಗಳ ಮೂಲಕ ದೂರದ ಪ್ರದೇಶಗಳಿಗೆ ಪ್ರಯಾಣ ಮಾಡಿ ಮಳೆ ಮೂಲಕ ಪುನಃ ಭೂಮಿಗೆ ಇಳಿದು ಅಲ್ಲಿ ವೃದ್ಧಿಸುತ್ತವೆ. ಕೆಲವು ಸೂಕ್ಷ್ಮ ಜೀವಿಗಳು, ಮೋಡಗಳು ಮಳೆಯಾಗಿ ಇಳಿಸಿ ಸುರಿಯಲು ತಮ್ಮ ಪಾತ್ರ ನಿರ್ವಹಿಸುತ್ತವೆ. ಆ ಮೂಲಕ ಅವು ವಾಯುಗುಣದ ಮೇಲೂ ತಮ್ಮ ಪ್ರಭಾವ ಬೀರಲಿವೆಯೆಂದು ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಡಾ. ಬಿಲ್ ಹ್ಯಾಮಿಲ್ಟನ್ ಮತ್ತು ಈಸ್ಟ್ ಆಂಗ್ಲಿಯ ವಿಶ್ವವಿದ್ಯಾನಿಲಯದ ಟಿಮ್‌ಲೆಂಟನ್ ಅಭಿಪ್ರಾಯ ಪಟ್ಟಿದ್ದಾರೆ. 'ತಮ್ಮ ಹಿತದೃಷ್ಟಿಯಿಂದಲೇ ಕೆಲವು ಸೂಕ್ಷ್ಮ ಜೀವಿಗಳು ಮೋಡಗಳು ಮಳೆಯಾಗುವಂತೆ ಪರಿವರ್ತಿಸುವವು

(ಕೃಪೆ : 'ಜಾಣ')





# ನಿವೇದಿತಾ ಪ್ರೌಢಶಾಲಾ ವಿದ್ಯಾರ್ಥಿ ಸಂಘದ ಉದ್ಘಾಟನೆ - ಒಂದು ವರದಿ




ಶ್ರೀಕ್ಷೇತ್ರದ ಕಿರಿಯ ಶ್ರೀಗಳಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರಿಂದ ಆಶೀರ್ವಚನ

ಆಗಸ್ಟ್ ೮ ರಂದು ಕ್ಯಾತಸಂದ್ರದಲ್ಲಿರುವ ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ಆಡಳಿತಕ್ಕೊಳಪಟ್ಟ ನಿವೇದಿತಾ ಪ್ರೌಢಶಾಲೆಯ ಪ್ರಸ್ತುತ ಸಾಲಿನ ವಿದ್ಯಾರ್ಥಿ ಸಂಘದ ಸಾಂಸ್ಕೃತಿಕ ಚಟುವಟಿಕೆಗಳ ಪ್ರಾರಂಭ ಶ್ರೀ ಸಿದ್ಧಗಂಗಾ ಕಿರಿಯ ಶ್ರೀಶ್ರೀಗಳಾದ ಶ್ರೀ ಸಿದ್ಧಲಿಂಗಸ್ವಾಮಿಗಳವರ ಸಾನ್ನಿಧ್ಯದಲ್ಲಿ ನಡೆಯಿತು. ಸಭೆಯ ಅಧ್ಯಕ್ಷತೆಯನ್ನು ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆಯ ವಿದ್ಯಾಧಿಕಾರಿಗಳಾದ ಶ್ರೀ ಸಿ.ಎಸ್. ಸಿದ್ಧಲಿಂಗಯ್ಯನವರು ವಹಿಸಿದ್ದರು.

ಕಾರ್ಯಕ್ರಮ ಕುಮಾರಿ ಬಿ.ವಿ. ಶಾರದಮ್ಮ ಮತ್ತು ಸಂಗಡಿಗರ ಪ್ರಾರ್ಥನೆಯಿಂದ ಆರಂಭವಾಯಿತು. ಮುಖ್ಯೋಪಾಧ್ಯಾಯರಾದ ಶ್ರೀ ಕೆ.ಎಚ್. ಶಿವರುದ್ರಯ್ಯ ಅವರು ಸ್ವಾಗತಿಸಿದರು. ಕಾರ್ಯಕ್ರಮವನ್ನು ಜ್ಯೋತಿ ಬೆಳಗಿಸುವುದರ ಮೂಲಕ ಉದ್ಘಾಟಿಸಿದ ಪಂಡಿತನಹಳ್ಳಿಯಲ್ಲಿರುವ ಟಿ.ವಿ.ಎಸ್. ಎಲೆಕ್ಟ್ರಾನಿಕ್ಸ್‌ನ ಅಸಿಸ್ಟೆಂಟ್ ಜನರಲ್ ಮ್ಯಾನೇಜರ್ ಶ್ರೀ ಎಂ.ಆರ್. ವಿಜಯಕುಮಾರ್ ಅವರು ಮಾತನಾಡಿ, "ಮಕ್ಕಳು ವಿದ್ಯಾವಂತರಾಗಿ ದೇಶದ ಕೀರ್ತಿಯನ್ನು ಬೆಳಗಿಸಲಿ" ಎಂದು ಕರೆ ನೀಡಿದರು. ಪ್ರಸಕ್ತ ಸಾಲಿನಲ್ಲಿ ನಿವೇದಿತಾ ಶಾಲೆಯಲ್ಲಿ ಅತಿ ಹೆಚ್ಚು ಅಂಕ ಗಳಿಸಿದ ಇಬ್ಬರು ವಿದ್ಯಾರ್ಥಿಗಳಿಗೆ ತಲಾ ೧೦೦೦ ರೂ. ನಗದು ಪುರಸ್ಕಾರ ನೀಡಿ ಗೌರವಿಸಿದರು.

ವಿವಿಧ ಸಂಸ್ಥೆಗಳು ನೀಡಿದ ಕೊಡುಗೆಗಳನ್ನು ಜಿಲ್ಲಾ ಪಂಚಾಯಿತಿ ಸದಸ್ಯರಾದ ಶ್ರೀಮತಿ ಎಸ್.ಆರ್. ಶಾಂತಲ ಅವರು ವಿತರಿಸಿ ಮಾತನಾಡಿದರು. ಕರ್ನಾಟಕ ರಾಜ್ಯ ಕರಕುಶಲ ನಿಗಮದ ಮಾಜಿ ನಿರ್ದೇಶಕರಾದ ಶ್ರೀಮತಿ ರೇಣುಕಾ ಪರಮೇಶ ಅವರು ಪ್ರತಿಭಾವಂತ ವಿದ್ಯಾರ್ಥಿಗಳಿಗೆ ತಮ್ಮ ಕೊಡುಗೆ ನೀಡಿ



ಶಾಲೆಯ ಮುಖ್ಯೋಪಾಧ್ಯಾಯರಾದ
ಶ್ರೀ ಕೆ.ಹೆಚ್. ಶಿವರುದ್ರಯ್ಯನವರಿಂದ ಸ್ವಾಗತ

ಗೌರವಿಸಿದರು. ಅವರು ಈ ಸಂದರ್ಭದಲ್ಲಿ ಮಾತನಾಡಿ ಶಾಲೆಯ ಸರ್ವತೋಮುಖ ಅಭಿವೃದ್ಧಿಗೆ ಎಲ್ಲಾ ರೀತಿಯ ನೆರವನ್ನು ನೀಡುವುದಾಗಿ ತಿಳಿಸಿದರು.

ಮುಖ್ಯ ಉಪನ್ಯಾಸಕಾರರಾಗಿ ಆಗಮಿಸಿದ್ದ 'ಮಹಾಮನೆ' ಸಂಪಾದಕರು, 'ಸಿದ್ಧಗಂಗಾ' ಮಾಸಪತ್ರಿಕೆಯ ಸಹ ಸಂಪಾದಕರೂ ಆದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪ ಅವರು ತಮ್ಮ ಉಪನ್ಯಾಸದಲ್ಲಿ, 'ವಿದ್ಯಾರ್ಥಿಗಳು ಏಕಾಗ್ರ ಚಿತ್ತದಿಂದ ಓದಿ ಶಾಲೆಗೆ ಕೀರ್ತಿ ತರಬೇಕು. ಪರಮಪೂಜ್ಯ ಶ್ರೀಶ್ರೀಗಳವರು ಸ್ಥಾಪಿಸಿರುವ ಈ ಶಾಲೆಯಲ್ಲಿ ಓದಲು ಅವಕಾಶ ದೊರೆತಿರುವುದು ನಿಮ್ಮೆಲ್ಲರ ಪುಣ್ಯ. ಅವರ ಅನುಗ್ರಹದ ದಿವ್ಯ ಬೆಳಕಿನಲ್ಲಿ ನಿಮ್ಮ ಭವಿಷ್ಯನ್ನು ರೂಪಿಸಿಕೊಳ್ಳಿ' ಎಂದು ತಿಳಿಸಿದರು.

ಇದೇ ಸಂದರ್ಭದಲ್ಲಿ ಕೋರಾದಲ್ಲಿರುವ ಶ್ರೀ ಮಹಾಲಿಂಗೇಶ್ವರ ಪ್ರೌಢಶಾಲೆಯ ಮುಖ್ಯೋಪಾಧ್ಯಾಯರಾದ ಶ್ರೀ ಸಿ. ರೇಣುಕಾರಾಧ್ಯರವರನ್ನು ಸನ್ಮಾನಿಸಲಾಯಿತು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀ ಎಸ್. ವಿಶ್ವನಾಥ ಅವರು ಮಾತನಾಡಿ, 'ಇದು ಸ್ಪರ್ಧಾತ್ಮಕ ಯುಗ. ವಿದ್ಯಾರ್ಥಿಗಳಾದ ನೀವು ಕಷ್ಟಪಟ್ಟು ಓದಿ ಹೆಚ್ಚು ಅಂಕಗಳನ್ನು ಪಡೆಯದಿದ್ದರೆ ಭವಿಷ್ಯ ಶೂನ್ಯವಾಗುತ್ತದೆ' ಎಂದು ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಶ್ರೀ ಸಿ.ಎಸ್. ಸಿದ್ಧಲಿಂಗಯ್ಯನವರು "ವಿದ್ಯಾರ್ಥಿಗಳು ಜೀವನದಲ್ಲಿ ಶ್ರದ್ಧೆ, ಶಿಸ್ತು, ಪ್ರಾಣಿಕತೆಯನ್ನು ಬೆಳೆಸಿಕೊಳ್ಳಬೇಕು" ಎಂದು ಹಿತವಚನ ಹೇಳಿದರು.

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗಸ್ವಾಮಿಗಳು ತಮ್ಮ ಅನುಗ್ರಹ ನುಡಿಗಳಲ್ಲಿ "ವಿದ್ಯಾರ್ಥಿಗಳು ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳುವುದಕ್ಕೆ ಇದು ಸಕಾಲ. ಪರಮಪೂಜ್ಯರ ದೂರದೃಷ್ಟಿಯ ಫಲವಾಗಿ ನಿಮಗೆಲ್ಲ ಓದಲು ಸುವರ್ಣ ಅವಕಾಶ ದೊರೆತಿದೆ. ಈ ಅವಕಾಶವನ್ನು ಸೂಕ್ತ ರೀತಿಯಲ್ಲಿ ಬೆಳೆಸಿಕೊಂಡು, ವಿದ್ಯಾವಂತರಾಗಿ ದೇಶದ ಅಭಿವೃದ್ಧಿಗೆ ಸೇವೆ ಸಲ್ಲಿಸುವಂತಾಗಬೇಕು, ಪೂಜ್ಯ ಶ್ರೀಶ್ರೀಗಳವರ ಅನುಗ್ರಹ ಸದಾ ನಿಮ್ಮ ಮೇಲಿದೆ" ಎಂದು ನುಡಿದರು.



ವಿದ್ಯಾರ್ಥಿಗಳಿಂದ ಸಾಂಸ್ಕೃತಿಕ ಕಾರ್ಯಕ್ರಮ

ಶಾಲಾ ವಿದ್ಯಾರ್ಥಿಗಳು ಸಾಂಸ್ಕೃತಿಕ ಕಾರ್ಯಕ್ರಮ ನಡೆಸಿಕೊಟ್ಟು ತಮ್ಮ ಪ್ರತಿಭಾ ಶ್ರೀಮಂತಿಕೆಯನ್ನು ಪರಿಚಯ ಮಾಡಿಕೊಟ್ಟರು. ಶ್ರೀ ಬಿ. ಮಹಾದೇವಪ್ಪನವರು ಕಾರ್ಯಕ್ರಮ ನಿರೂಪಣೆ ಮಾಡಿದರು. ಶ್ರೀ ಎಂ. ಬಸವರಾಜಯ್ಯನವರು ವಂದನೆ ಸಲ್ಲಿಸಿದರು. □





**ಶ್ರೀಮಠದಲ್ಲಿರುವ ಸನಿವಾಸ ವಿದ್ಯಾಸಂಸ್ಥೆಗಳ ಸಂಯುಕ್ತ ವಿದ್ಯಾರ್ಥಿ ಸಂಘದ ಉದ್ಘಾಟನಾ ಸಮಾರಂಭ**




ಪರಮಪೂಜ್ಯ ಶ್ರೀಶ್ರೀಗಳವರಿಂದ ಆಶೀರ್ವಚನ. ಚಿತ್ರದಲ್ಲಿ : ಕಿರಿಯ ಶ್ರೀಗಳು, ತುಮಕೂರು ಜಿಲ್ಲಾಧಿಕಾರಿ ಶ್ರೀ ಬಿ.ಆರ್. ಜಯರಾಮರಾಜ ಅರಸ್ ಮತ್ತು ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಶ್ರೀ ಆರ್. ಹಿತೇಂದ್ರ ಅವರನ್ನು ಕಾಣಬಹುದು.



ತುಮಕೂರು ಜಿಲ್ಲಾಧಿಕಾರಿ ಶ್ರೀ ಬಿ.ಆರ್. ಜಯರಾಮರಾಜ ಅರಸ್ ಅವರು ಮಾತನಾಡುತ್ತಿರುವುದು

## ಮಹಾದಾಸೋಹ ನಿಧಿಗೆ ೨೦೦೧ ರೂ.ಗಳಿಗೂ ಹೆಚ್ಚು ಕಾಣಿಕೆಯನ್ನು ನೀಡಿದವರ ಪಟ್ಟಿ

(ಮುಂದುವರೆದುದು)

| ಕ್ರಸಂ. ಹೆಸರು ಮತ್ತು ವಿಳಾಸ | ಮೊತ್ತ |
|---|---|
| ೨೯೨. **ಶ್ರೀ ಇ.ಎಸ್. ಪಾಲಾಕ್ಷಯ್ಯ**<br>ಅಭಿಯಂತರರು, ಇಮಚೇನಹಳ್ಳಿ,<br>ನರಸೀಪುರ ಅಂಚೆ, ನೆಲಮಂಗಲ ತಾಲ್ಲೂಕು,<br>ಬೆಂಗಳೂರು (ಗ್ರಾ) ಜಿಲ್ಲೆ | ೫,೦೦೦-೦೦ |
| ೨೯೩. **ಶ್ರೀ ಪುಟ್ಟತಿಪ್ಪೇರುದ್ರಸ್ವಾಮಿ**<br>ತಂದೆ ಶ್ರೀ ಟಿ.ಎಸ್. ತಿಪ್ಪೇಸ್ವಾಮಿ,<br>ಜಯಲಕ್ಷ್ಮಿ ಪ್ರಾವಿಷನ್ ಸ್ಟೋರ್,<br>ಹೊರಕೆರೆ, ದೇವರಪುರ-೫೭೭ ೫೫೭<br>ಚಿತ್ರದುರ್ಗ ಜಿಲ್ಲೆ. | ೨,೦೦೧-೦೦ |
| ೨೯೪. **ಶ್ರೀ ಈಶ್ವರಪ್ಪ**<br>ಶ್ರೀ ಸಿದ್ಧಗಂಗಾ ಟ್ರೇಡಿಂಗ್ ಕಂಪೆನಿ,<br>ಗಜೇಂದ್ರಗಡ, ಎ.ಪಿ.ಎಂ.ಸಿ. ಯಾರ್ಡ್,<br>ರೋಣ ತಾಲ್ಲೂಕು, ಗದಗ ಜಿಲ್ಲೆ. | ೧,೦೦೧-೦೦<br>(೧ನೇ ಕಂತು) |
| ೨೯೫. **ಶ್ರೀ ಜಿ. ಮಂಜುಳ**<br>ಗಂಡ ಶ್ರೀ ಟಿ. ಭಾಸ್ಕರ,<br>ನಂ. ೧೭೩೬, 8ನೇ ಕ್ರಾಸ್, ೧೭ನೇ ಮೇನ್,<br>೨ನೇ ಘಟ್ಟ, ಜೆ.ಪಿ. ನಗರ, ಬೆಂಗಳೂರು-೫೬೦ ೦೭೮ | ೧,೦೧-೦೦<br>(೧ನೇ ಕಂತು) |
| ೨೯೬. **ಶ್ರೀ ಎಂ. ನಂಜುಂಡಪ್ಪ**<br>ಮುಖ್ಯೋಪಾಧ್ಯಾಯರು<br>ಅಂಚೆ ಗುರುಡಿ, ಗೌರಿಬಿದನೂರು ತಾಲ್ಲೂಕು,<br>ಕೋಲಾರ ಜಿಲ್ಲೆ. | ೧,೦೦೨-೦೦<br>(೧ನೇ ಕಂತು) |
| ೨೯೭. **ಶ್ರೀ ಎಂ. ಕರಿಬಸಪ್ಪ**<br>ಜೆ. ೨೩, ಜಿ.ಹೆಚ್.ಎಸ್. ರಸ್ತೆ,<br>ಡಂಕನಕೋಟೆ, ಧರ್ಮಪುರಿ ಜಿಲ್ಲೆ, ತಮಿಳುನಾಡು. | ೨,೦೦೦-೦೦ |
| ೨೯೮. **ಶ್ರೀ ಟಿ.ಎಸ್. ಶಿವಸಾಗರ್**<br>ತಂದೆ ಶ್ರೀ ಟಿ.ಎಸ್. ಶಿವಪ್ರಕಾಶ್,<br>'ಶಿವಸದನ', ೨ನೇ ಕ್ರಾಸ್, ಅಶೋಕನಗರ,<br>ತುಮಕೂರು. | ೨,೦೦೧-೦೦ |
| ೨೯೯. **ಶ್ರೀ ಹೆಚ್.ಎಸ್. ಜಗದೀಶ್,**<br>ತಂದೆ ಶ್ರೀ ಹೆಚ್.ಎಸ್. ಸಿದ್ಧಲಿಂಗಯ್ಯ,<br>ನಂ. ೭೩೪, ೯ನೇ ಕ್ರಾಸ್,<br>೫ನೇ ಮುಖ್ಯರಸ್ತೆ, ಎಂ.ಸಿ. ಲೇ-ಔಟ್,<br>ವಿಜಯನಗರ, ಬೆಂಗಳೂರು-೪೦ | ೫,೦೦೧-೦೦ |
| ೩೦೦. **ಶ್ರೀ ಚಂದ್ರಪ್ಪ**<br>ತಂದೆ ಶ್ರೀ ಶಿವಣ್ಣ,<br>ಅಂಚೆ ಅರಳೀಕೆರೆ, ತುರುವೇಕೆರೆ ತಾಲ್ಲೂಕು,<br>ತುಮಕೂರು ಜಿಲ್ಲೆ. | ೨,೦೦೧-೦೦ |
| ೩೦೧. **ಶ್ರೀ ಸದಾಶಿವ,**<br>ತಂದೆ ದಿವಂಗತ ನಂದೀಶಯ್ಯ ಮತ್ತು<br>ಶ್ರೀಮತಿ ಶಾರದಮ್ಮ 'ಸುಜಾತ ನಿಲಯ',<br>೧ನೇ ಮುಖ್ಯರಸ್ತೆ,<br>ಶ್ರೀ ಸಿದ್ಧಗಂಗಾ ಬಡಾವಣೆ,<br>ತುಮಕೂರು. | ೧,೦೦೦-೦೦<br>(೧ನೇ ಕಂತು) |
| ೩೦೨. **ಶ್ರೀ ಎಂ.ಸಿ. ಚಂದ್ರಯ್ಯ**<br>ನಂ. ೪೩, ಅಷ್ಟಗ್ರಾಮ ಲೇ-ಔಟ್,<br>ಬಸವೇಶ್ವರನಗರ,<br>ಬೆಂಗಳೂರು-೭೯ | ೯೦೦-೦೦<br>(೧ನೇ ಕಂತು) |
| ೩೦೩. **ಶ್ರೀಮತಿ ಉಮಾದೇವಿ**<br>ತಂದೆ ಶ್ರೀ ಹೆಚ್. ಲಿಂಗಪ್ಪ, ಬಿ.ಎ., ಎಲ್.ಎಲ್.ಬಿ.<br>ವಕೀಲರು, ೩ನೇ ಮುಖ್ಯರಸ್ತೆ,<br>ಕೆ.ಆರ್. ಬಡಾವಣೆ, ತಿಪಟೂರು,<br>ತುಮಕೂರು ಜಿಲ್ಲೆ. | ೨,೦೦೫-೦೦ |
| ೩೦೪. **ಶ್ರೀಮತಿ ಎಸ್.ಎನ್. ಮಂಜುಳ ಮತ್ತು**<br>**ಶ್ರೀ ಪರಮೇಶ್ವರಪ್ಪ,** ಎಂ.ಎಸ್.ಸಿ.<br>ಹೇಮಗಿರಿ, ಮುಲಪನಹಳ್ಳಿ,<br>ಅಂಚೆ ಕೆರೆಸಂತೆ,<br>ಕಡೂರು ತಾಲ್ಲೂಕು,<br>ಚಿಕ್ಕಮಗಳೂರು ಜಿಲ್ಲೆ. | ೨,೦೦೧-೦೦ |
| ೩೦೫. **ಶ್ರೀ ಎ. ನಂಜುಂಡಪ್ಪ**<br>ನಂ. ೨, ಉಮೇಶ ನಿಲಯ,<br>೫ನೇ ಕ್ರಾಸ್, ೧ನೇ ಮುಖ್ಯರಸ್ತೆ,<br>ಯಶವಂತಪುರ, ಬೆಂಗಳೂರು-೨೨ | ೧,೧೦೧-೦೦<br>(೧ನೇ ಕಂತು) |
| ೩೦೬. **ಶ್ರೀ ಬಿ.ಜಿ. ಲೋಕೇಶ್**<br>ತಂದೆ ಶ್ರೀ ಕೆ.ಜಿ. ಗೋವಿಂದಯ್ಯ,<br>ನಂ. ೧೧೨೬, ಆದರ್ಶ ಲೇ-ಔಟ್,<br>೧೦ನೇ ಕ್ರಾಸ್, ವೆಸ್ಟ್ ಆಫ್ ಕಾರ್ಡ್ ರಸ್ತೆ,<br>೩ನೇ ಹಂತ, ಬಸವೇಶ್ವರನಗರ, ಬೆಂಗಳೂರು. | ೧,೦೦೧-೦೦<br>(೧ನೇ ಕಂತು) |

(ಮುಂದುವರಿಯುತ್ತದೆ)

RNI No. 17139/69 "Siddaganga" Monthly - Postal Reg. No. KA/SK/TMR/385/2000



ಅಖಿಲ ಭಾರತ ವೀರಶೈವ ಮಹಾಸಭಾದ ಜಯನಗರ ಘಟಕವು ಆಚರಿಸಿದ 'ಬಸವ ಜಯಂತಿ'ಯನ್ನು ಸಿದ್ಧಗಂಗಾ ಕ್ಷೇತ್ರದ ಪೂಜ್ಯ ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಉದ್ಘಾಟಿಸುತ್ತಿರುವುದು. ಚಿತ್ರದಲ್ಲಿ ಶ್ರೀ ವಿಜಯಕುಮಾರ್, ಶಾಸಕ ಶ್ರೀ ವಿ. ಸೋಮಣ್ಣ, ಶ್ರೀ ಬಿ.ಎಸ್. ಮುದ್ದಪ್ಪ, ಶಾಸಕ ಶ್ರೀ ಚಂದ್ರಕಾಂತ ಬೆಲ್ಲದ, ಡಾ. ಎನ್. ರುದ್ರಯ್ಯ ಮತ್ತು ಶ್ರೀಮತಿ ವಿನೋದಾ ನಟರಾಜ್ ಅವರನ್ನು ಕಾಣಬಹುದು.



ಆಗಸ್ಟ್ ೯ರಂದು ತುಮಕೂರಿನಲ್ಲಿ ಶ್ರೀನಿಧಿ ಸಾಲ್ವೆಕ್ಸ್ ಪ್ರಾರಂಭೋತ್ಸವವನ್ನು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ರಾಮಕೃಷ್ಣ ವಿವೇಕಾನಂದ ಆಶ್ರಮದ ಅಧ್ಯಕ್ಷರಾದ ಶ್ರೀ ವೀರೇಶಾನಂದ ಸ್ವಾಮಿಗಳು, ಉನ್ನತ ಶಿಕ್ಷಣ ಸಚಿವರಾದ ಡಾ|| ಜಿ. ಪರಮೇಶ್ವರ್ ಮತ್ತು ವ್ಯವಸ್ಥಾಪಕ ನಿರ್ದೇಶಕ ಶ್ರೀ ವೆಂಕಟೇಶ್ ಮೊದಲಾದ ಗಣ್ಯರು ಉಪಸ್ಥಿತರಿದ್ದರು.